# ಮುನ್ನುಡಿ

ಈ ಪುಟ್ಟ ಗ್ರಂಥವನ್ನು ರಚಿಸಿದವರು ಮಹಾತ್ಮರೆಂದು ಅವರ ಜೀವನದ ಲಘುಪರಿಚಯದಿಂದ ಸ್ಪಷ್ಟವಾಗಿದೆ. ಮಹಾತ್ಮರು ರಚಿಸಿದ ಗ್ರಂಥಕ್ಕೆ ನನ್ನಂತಹ ಅಲ್ಪನು ಮುನ್ನುಡಿ ಬರೆಯಲು ಎಂದಿಗೂ ಅರ್ಹನಾಗುವುದಿಲ್ಲ. ಆದರೂ ಗ್ರಂಥ ಪರಿಚಯ ಮಾಡಿಕೊಡಬೇಕಾದ ಆವಶ್ಯಕತೆಯ ದೆಸೆಯಿಂದ ಎರಡು ಮಾತುಗಳನ್ನು ಹೇಳುವೆನು.

ಶ್ರೀವ್ಯಾಸತತ್ವಜ್ಞ ತೀರ್ಥರು ಈ ಪುಟ್ಟ ಗ್ರಂಥವನ್ನು ತಮ್ಮ ಪೂರ್ವಾಶ್ರಮದಲ್ಲಿಯೇ ರಚಿಸಿದರೆನ್ನುವುದು ಮೂಲಗ್ರಂಥದಿಂದಲೇ ತಿಳಿಯುವುದು. ಇದರ ನಾಮವು ಶ್ರೀಮಾನಸಸ್ಮೃತಿ ಅಥವಾ ಮಾನಸಧ್ಯಾನ ಪದ್ಧತಿಯು. ಇದರ ಅಭ್ಯಾಸದಿಂದಲೂ ಅದರಲ್ಲಿ ಹೇಳಿರುವಂತೆ ತಿಳಿದು ಉಪಾಸಿಸುವರಿಗೆ ಆ ಮಹಾತ್ಮರ ಅಭಿಪ್ರಾಯದಂತೆ ಶ್ರೀಶನ ಅಪರೋಕ್ಷ ಜ್ಞಾನವೇ ಮುಖ್ಯಫಲವು. **"ಕಿಮಲಭ್ಯಂ ಭಗವತಿ ಪ್ರಸನ್ನೆ ಶ್ರೀನಿಕೇತನೆ"** ಎಂಬಂತೆ ಇತರ ಇಷ್ಟಾರ್ಥಗಳು ದೊರೆಯುವುದು ಆಶ್ಚರ್ಯವಲ್ಲ.

**"ಯೋವೇದ ನಿಹಿತಂ ಗುಹಾಯಾಂ ಪರಮೇವ್ಯೋರ್ಮ ಸೋಽಶ್ನುತೆ ಸರ್ವಾನ್ಕಾಮಾನ್"** ಎಂಬ ಶ್ರುತಿಯು ಮತ್ತು **"ಸರ್ವೇಽಪಿ ಪುರುಷಾರ್ಥಾಃ ಸ್ಯುಃಜ್ಞಾನಾದೇವ ನ ಸಂಶಯಃ"** ಎಂಬ ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರ ವಚನದಂತೆಯೂ ಪ್ರತಿಯೊಬ್ಬ ಸುಜೀವನಿಗೂ ಶ್ರೀಶನ ಅಪರೋಕ್ಷಜ್ಞಾನ ಮತ್ತು ತನ್ನ ಸ್ವರೂಪಜ್ಞಾನ ವಾದಲ್ಲದೆ ಆತನ ಆತ್ಯಂತಿಕ ದುಃಖ ಕ್ಲೇಶಾದಿಗಳು ನಿವೃತ್ತವಾಗಲಾರವು. ಇಂತಹ ಜ್ಞಾನಕ್ಕೆ ಶ್ರವಣ, ಮನನ ಮತ್ತು ನಿಧಿಧ್ಯಾಸನವೆಂಬ ಮೂರು ಸಾಧನಗಳು ಅವಶ್ಯಕವಾದವು. ಶ್ರವಣಮಾಡಿದರೂ ಆ ಗ್ರಂಥಗಳ ವಿಷಯಗಳನ್ನೆಲ್ಲಾ ಸಂಗ್ರಹಿಸಿ ತನ್ನ ಯೋಗ್ಯತೆಗೆ ತಕ್ಕಂತೆ ಶ್ರೀಶನ ಧ್ಯಾನಮಾಡಲು ಅನುಕೂಲ

ವಾದ ವಿಷಯಗಳನ್ನು ಸಂಗ್ರಹಿಸಿಕೊಳ್ಳುವುದು ಕಠಿಣವಾದುದೆಂದು ಸರ್ವರಿಗೂ ಸಮ್ಮತವು. ಆದುದರಿಂದ ಈ ಮಹಾತ್ಮರು ಈ ಪುಟ್ಟ ಗ್ರಂಥ ದಲ್ಲಿ ಉಪಾಸನೆ ಮತ್ತು ಧ್ಯಾನದ ವಿಷಯಗಳನ್ನು ಸಪ್ರಮಾಣವಾಗಿ, ಸಯುಕ್ತಿಕವಾಗಿ ಮತ್ತು ವಿಸ್ತಾರವಾಗಿ ತಿಳಿಸುವ ಸಕಲ ಉಪನಿಷದರ್ಥಗಳನ್ನು ಮಂದಮತಿಗಳಿಗೂ ಮತ್ತು ಪಂಡಿತರಿಗೂ ಅನುಕೂಲವಾಗುವಂತೆ ಸಂಗ್ರಹಿಸಿ ರುವರು. ಇದರಿಂದ ಇವರು ಸಕಲ ಸಾಧಕರ ಕೃತಜ್ಞತೆಗೆ ಪಾತ್ರರೆಂಬ ವಿಷಯವು ನಿಸ್ಸಂಶಯವು.

ಈ ಗ್ರಂಥದ ಮೂಲ ಮೂರು ಪ್ರತಿಗಳು ದೊರೆತವು. ಇವು ಕ್ರಿ. ಶ. 18ನೇ ಶತಮಾನಕ್ಕೆ ಸಂಬಂಧಪಟ್ಟವು. ಒಟ್ಟು 270 ಶ್ಲೋಕಗಳಿರುವುವು. ಆ ಮೂರನ್ನು ಸಮ ಪ್ರತಿ ನೋಡಿ ಸಾಕಾದಷ್ಟು ಮಟ್ಟಿಗೆ ಶೋಧಿಸಲ್ಪಟ್ಟಿದೆ. ಪ್ರಕಾಶಕರ ಅಪೇಕ್ಷೆಯಂತೆ ನನ್ನ ಅಲ್ಪಮತಿಯನ್ನನುಸರಿಸಿ ಸಂಕೋಚವಾಗಿ ಕನ್ನಡದಲ್ಲಿ ಅನುವಾದ ಮಾಡಲ್ಪಟ್ಟಿರುವುದು. ಬಲ್ಲವರಿಗೆ ಇನ್ನೂ ವಿಶೇಷ ಅರ್ಥವಾಗಬಹುದು. ಈ ಅರ್ಥಗಳಿಗೆ ಸಮಾಖ್ಯಾರೂಪವಾದ ಉಪನಿಷ ದಾದಿಗಳ ವಾಕ್ಯಗಳನ್ನು ಗ್ರಂಥ ದೊಡ್ಡದಾಗವುದೆಂಬ ಭೀತಿಯಿಂದ ಉದಹರಿಸಿದೆ ಬಿಡಬೇಕಾಗಿಬಂತು.

ಇದರಲ್ಲಿರುವ ವಿಷಯಗಳನ್ನು, 1) ಮಾನಸಸ್ನಾನ 2)ಆಸನ 3) ಸ್ಥೂಲಶರೀರ, ಅದರಲ್ಲಿರುವ ತತ್ವಗಳು, ಮತ್ತು ಅಂಗರಕ್ಷಕ ಭಗವದ್ರೂಪಗಳು 4) ರೋಮಕೂಪಗಳು ಅಲ್ಲಿರುವ ತೀರ್ಥ ಮತ್ತು ಭಗವದ್ರೂಪಗಳು, 5) ಸಪ್ತಧಾತು, ಎಲುಬು, ಅಂಗುಲಿಯ ಪರ್ವಗಳು ಮತ್ತು ತತ್ವಗಳು ಅಲ್ಲಲ್ಲಿರುವ ಅಭಿಮಾನಿ ದೇವತೆಗಳು ಮತ್ತು ಭಗವದ್ರೂಪಗಳು, 6) ಮರಣದ ಕಾಲ ವನ್ನು ತಿಳಿಯುವ ಸುಲಭೋಪಾಯ, 7) ಮುಖ, ಬಾಹು ಮತ್ತು ಹಸ್ತ ಇವುಗಳಲ್ಲಿರುವ ಶ್ರೀಶನ ರೂಪ ವಿಶೇಷಗಳು, 8) ಸ್ತ್ರೀಸಂಗ (ವಾಮದೇವ ಯಜ್ಞ), 9) ತೊಡೆ, ಕಾಲು ಮೊದಲಾದ ಸ್ಥಳಗಳಲ್ಲಿರುವ ಭಗವದ್ರೂಪಗಳು ರಮಾತ್ಮಕವಾದ ಆಕಾಶವಿರುವ ಸ್ಥಳಗಳು ಅಲ್ಲಿಯೂ, ಶಿರಸ್ಸು ಮತ್ತು ಹೃದಯದಲ್ಲಿರುವ ಭಗವದ್ರೂಪಗಳು, 10) ಗಾಯತ್ರೀ ವಿಷಯ 11) ಭೋಜನದವಿಷಯ, (ವೈಶ್ವಾನರಯಜ್ಞ ಅಥವಾ ಪ್ರಾಣಾಗ್ನಿಹೋತ್ರ)

ಇದರಿಂದ ಪ್ರಾಣಜಯ, ಓಂಕಾರಧ್ವನಿಯ ವಿಷಯ, 12) ಈ ದೇಹವು ವಿಷ್ಣು ರಥ, 13) ಸುಷುಮ್ನಾದಿ ಪ್ರಧಾನನಾಡಿ ಅವುಗಳಲ್ಲಿರುವ 32 ಕಮಲಗಳು ಅಲ್ಲಿರುವ ಭಗವದ್ರೂಪಗಳು, 14) ದೇವಯಾನ, ಪಿತೃಯಾನ, ಬ್ರಹ್ಮಯಾನ, ಅರ್ಚಿರಾದಿ ಧೂಮಾದಿಮಾರ್ಗ ಮತ್ತು ದೇವತೆಗಳ ಗರುಡ ಶೇಷಮಾರ್ಗದಲ್ಲಿ ಲಯಕ್ರಮ 15) ಶಾಖಾನಾಡಿಗಳು ಮತ್ತು 16) ಮಾನಸಪೂಜಾವಿಧಿ ಎಂದು ವಿಭಾಗಮಾಡಬಹುದು,

ಮೇಲೆ ಹೇಳಿರುವ ಪ್ರತಿಯೊಂದು ವಿಷಯವನ್ನೂ ಪ್ರತ್ಯೇಕವಾಗಿ ವಿಮರ್ಶಿಸುತ್ತಾ ಆಧುನಿಕ ವಿಜ್ಞಾನವಾದಕ್ಕೆ ಹೋಲಿಸಿ ವಿಚಾರ ಮಾಡ ಹೋದರೆ ಇದೇ ಒಂದು ಪ್ರತ್ಯೇಕ ಪುಸ್ತಕವಾಗಬಹುದು. ಆದುದರಿಂದ ಸಂಗ್ರಹವಾಗಿ ಹೇಳಬೇಕಾಗಿದೆ.

ಆಂಗ್ಲವಿದ್ಯಾ ವಿಶಾರದರು ತಮ್ಮ ವಿಮರ್ಶೆಯ ಸ್ವಾನುಭವವೆಂದು "Physiology" ಮತ್ತು "Anotomy" ಎಂಬ ಶಾರೀರಕ ವಿಷಯಗಳಲ್ಲಿ ತಿಳಿಯಿಸಿರುವ ವಿಷಯಗಳಿಗಿಂತಲೂ ಅಧಿಕವಾದ ಮತ್ತು ಇದು ವಿನಾ ಮತ್ತು ಮುಂದಿಲ್ಲವೆಂಬ ವಿಷಯ ಈ ಗ್ರಂಥದಿಂದ ನಿರ್ಣಯವಾಗುವುದು. ಶ್ರೀಶನ ಅಪರೋಕ್ಷ ಜ್ಞಾನಿಗಳ ಅನುಭವಕ್ಕೂ, ಅತನನ್ನು ಮರೆತು ತಾವೇ ಸ್ವತಂತ್ರ ರೆಂಬ ಬುದ್ಧಿಯಿಂದ ವಿಮರ್ಶಿಸಿ ನಿಶ್ಚಯಿಸುವ ಜಾಣರಿಗೂ ಇರುವ ವೆತ್ಯಾಸ ವನ್ನು ಇಲ್ಲಿ ಚೆನ್ನಾಗಿ ಮನಗಾಣಬಹುದು. ಆಂಗ್ಲ ವೈದ್ಯರು ರಕ್ತನಾಳಗಳು ಇಷ್ಟೇ ಇವೆ ಎಂದಾಗಲೀ ಅವುಗಳ ವಿಶೇಷ ವ್ಯಾಪಾರಗಳನ್ನಾಗಲೀ ಹಾಗೆ ಅವುಗಳ ಚಲನವಲನಾದಿಗಳಿಂದ ರೊಗೋತ್ಪತ್ತಿ ಮತ್ತು ತನ್ನಿವೃತ್ತಿಕಾರಣ ಗಳನ್ನಾಗಲೀ ಇವತ್ತಿನವರಿವಿಗೂ ಹೀಗೆಯೇಸರಿ ಎಂದು ನಿಶ್ಚಯವಾಗಿಯೂ, ಮತ್ತು ತೃಪ್ತಿಕರವಾಗಿಯೂ, ನಿರ್ಣಯಿಸಲು ಸಮರ್ಥರಾಗಿಲ್ಲ. ಮತ್ತು ಸ್ವಪ್ನಗಳ ವಿಷಯದಲ್ಲಿ ನಾವು ನೋಡಿದ ಪದಾರ್ಥಗಳೇ ಸ್ವತಂತ್ರವಾಗಿ ನಿದ್ರೆ ಯಕಾಲದಲ್ಲಿ ಕಾಣಬರುವುವು ಎಂದನ್ನುವರು. ಇದು ಅಪಹಾಸ್ಯಕ್ಕೆ ಕಾರಣ ವೆಂಬುದನ್ನೂ ಮರೆಯುವರು. ಈ ಪುಟ್ಟಗ್ರಂಥವನ್ನೂ ಮತ್ತು ಇದಕ್ಕೆ ಸಂಭಂದಿಸಿದ ಮೂಲಗ್ರಂಥಗಳಾದ ಬೃಹದಾರಣ್ಯ, ಛಾಂದೋಗ್ಯ, ಐತರೇಯ, ತೈತ್ತರೀಯ, ಷಟ್ಪ್ರಶ್ನ, ಮಾಂಡೂಕ, ಮತ್ತು ಅಥರ್ವಣ ಉಪನಿಷತ್ತು

ಗಳನ್ನೂ, ಶ್ರೀಮದ್ಭಗವದ್ಗೀತಾ ಮುಂತಾದ ಇತರ ಗ್ರಂಥಗಳನ್ನೂ, ಚೆನ್ನಾಗಿ ವಿಮರ್ಶಿಸಿದರೆ ಸಕಲವೂ ತಿಳಿಯಬರುವುದು. ಹಿಂದೂ ವೈದ್ಯರಿಗೆ ಕೂಡಾ ನಾಡಿಗಳನ್ನು ತಿಳಿದು ರೋಗದ ನಿದಾನವನ್ನು ಕಂಡು ಹಿಡಿಯಲು ತುಂಬಾ ಅನುಕೂಲ ವಾಗುವುದು.

ರೋಗಿಗಳು ತಮ್ಮ ವೈದ್ಯರಿಂದ ಅಪರಿಹಾರ್ಯವಾದ ಕಾಹಿಲೆಗಳನ್ನು, ಇದರಲ್ಲಿ ಹೇಳಿರುವಂತೆ ಕೆಲವು ದಿನಗಳವರಿಗೆ ಅಭ್ಯಸಿಸಿದರೆ, ಗುಣಪಡಿಸಿ ಕೊಳ್ಳಬಹುದು.

ಪತಂಜಲಿಯ ಯೋಗಸೂತ್ರಗಳಲ್ಲಿಯೂ, Hypnotism, Mesmerism, Magic, ಪರಮನೋಭಿಜ್ಞತಾಶಾಸ್ತ್ರ (Thought Reading) ಇತ್ಯಾದಿ ಗ್ರಂಥಗಳಲ್ಲಿ ಹೇಳಿರುವ, ಆಸನ, ಪ್ರಾಣಯಾಮ, ಇತರ ಕ್ಷುದ್ರೋಪಾಸನ ಇವುಗಳೆಲ್ಲವೂ ಕೇವಲ ಐಹಿಕವಾದ, ಅತ್ಯಲ್ಪವಾದ, ನಶ್ವರ ವಾದ ಮತ್ತು ಅನಿಷ್ಟಕರವಾದ ಫಲಪ್ರದವಾದುದು. ಆದರೆ ಈ ಗ್ರಂಥದಲ್ಲಿ ಹೇಳಿದಂತೆ ತಿಳಿದರೆ, ಉಪಾಸನೆಮಾಡಿ ಶ್ರೀಶನ ಅನುಗ್ರಹವನ್ನು ಗುರುದ್ವಾರ ಪಡೆದರೆ, ಸುಲಭವಾಗಿ ನಿತ್ಯವಾದ ನಿರ್ದುಃಖವಾದ ಆನಂದವನ್ನೂ ಮತ್ತು ತನ್ನ ಜ್ಞಾನ ಮಹಿಮೆಯಿಂದ ಇತರರ ಸಾವುಕೇಡುಗಳನ್ನೂ, ದುಃಖಗಳನ್ನೂ ಪರಿಹರಿಸುವುದಲ್ಲದೆ ತಾವೂ ಸುಖವಾಗಿ ಜೀವನ್ಮುಕ್ತರಾಗಿರಬಹುದೆಂಬುದನ್ನೂ ನಿಶ್ಚಯಿಸಬಹುದು.

ಈಗ ವಿಮರ್ಶೆ ಮತ್ತು ಪರೀಕ್ಷೆಯನ್ನು ಮಾಡಿ ತಮ್ಮ ಬುದ್ಧಿಬಲ ದಿಂದಲೂ ಮತ್ತು ಯಂತ್ರಗಳ ಸಹಾಯದಿಂದಲೂ ಕಂಡು ಹಿಡಿಯುತ್ತಿರುವ ವಿಷಯಗಳು ಅನಾದಿಯಿಂದ ಸಿದ್ಧವಾದವುಗಳೆಂದೂ, ಇವುಗಳನ್ನೆಲ್ಲಾ ನಾನಾರೀತಿಯಿಂದ ನಡೆಸಲು ಸಮರ್ಥನಾದ, ಸರ್ವರಿಂದ ಅತ್ಯುತ್ತಮನಾದ, ದೋಷದೂರನೂ ಮತ್ತು ಸರ್ವಜ್ಞತ್ವಾದಿ ಅನಂತ ಗುಣಪೂರ್ಣನಾದ ಶ್ರೀನಿವಾಸನು ಇರುವನೆಂಬುದನ್ನೂ ಮತ್ತು ಈ ವಿಷಯಗಳು ಹಿಂದೂಜನರ ವಿಶೇಷವಾಗಿ ಬ್ರಾಹ್ಮಣರ ತಪೋವಿದ್ಯಾ ಬಲದಿಂದ ಸರ್ವಾರ್ಥಗಳು ಸಿದ್ಧ ವಾಗುತ್ತಲಿದ್ದವು ಎಂಬೀ ವಿಷಯಗಳನ್ನು ನಿಶ್ಚಯಿಸಬಹುದು.

ಬ್ರಾಹ್ಮಣರು, ಹಿಂದಿನ ಮಹಾತ್ಮರು ಹೀಗೆ ಬರೆದಿಟ್ಟಿರುವ ಗ್ರಂಥಗಳ ಅಭ್ಯಾಸಮಾಡಿ, ತಾವು ಫಲಭಾಗಿಗಳಾಗುವುದಲ್ಲದೆ, ಇತರರನ್ನೂ ಕ್ಷೇಮಿಗಳನ್ನಾಗಿ ಮಾಡಬಹುದು. ಇದರಲ್ಲಿ ಹಸ್ತದೋಷಾದಿಗಳಿಂದ ತೋರಿಬರುವ ತಪ್ಪುಗಳನ್ನು ತಿದ್ದಿಕೊಂಡು ನಮಗೂ ತಿಳಿಸಬೇಕು.

ಎಷ್ಟೇ ಪ್ರಯತ್ನ ಮಾಡಿದರೂ "ತಪ್ಪುಮಾಡುವುದು ಮನುಜನ ಸ್ವಭಾವವೆಂದು ತೋರಿಸುವಂತೆ ಛಾಪೆಯಲ್ಲಿ ಅಲ್ಪತಪ್ಪುಗಳು ಬಂದೇ ಬಿಟ್ಟಿರುವುವು. ಅವನ್ನು ಬೇರೆ ಪುಟದಲ್ಲಿ ತೋರಿಸಿರುವಂತೆ ಓದುಗರು ತಿದ್ದಿಕೊಳ್ಳಬೇಕಾಗಿ ಪ್ರಾರ್ಥನೆಯು.

ಈ ಗ್ರಂಥ ಪ್ರಕಾಶಕ್ಕೆ ಸಕಲ ವಿಧದಿಂದಲೂ ಕಾರಣರು ಆದವಾನಿಯಲ್ಲಿರುವ ಮ|| ರಾ|| ಚಿಕ್ಕಾನಹಳ್ಳಿ ಜಹಗೀರ್ದಾರ್ ಕೃಷ್ಣರಾಯರು. ಇವರು ಈ ಗುರುಗಳ ಸಂತತಿಯ ವೇ| ವೆಂಕಟನರಸಿಂಹಾಚಾರ್ಯರ ಅಳಿಯಂದಿರು. ಇವರಲ್ಲಿಯೂ ಮತ್ತು ಇವರ ಕುಟುಂಬದಲ್ಲಿಯೂ, ಶ್ರೀವ್ಯಾಸತತ್ವಜ್ಞರ, ಮುಖ್ಯಪ್ರಾಣನ ಮತ್ತು, ಶ್ರೀ ಗೋಪಾಲಕೃಷ್ಣನ ಪೂರ್ಣಾನುಗ್ರಹವಿರಲೆಂದು ಪ್ರಾರ್ಥಿಸುವೆನು.

ಈ ಪುಸ್ತಕವನ್ನು ಸುಂದರವಾಗಿ, ಶೀಘ್ರವಾಗಿ ಮತ್ತು ವಿಶೇಷ ತಪ್ಪುಗಳಿಲ್ಲದಂತೆ ಮುದ್ರಣಮಾಡಿಕೊಟ್ಟ ಸುಬೋಧ ವಿದ್ಯುನ್ಮುದ್ರಣಾಲಯದ ಅಧಿಕಾರಿಗಳಿಗೆ ಪ್ರಕಾಶಕರ ಪರವಾಗಿ ವಂದನೆಗಳು.

ಕಲ್ಯಾಣಪುರೀ,
5—12—1940.
ವಿಕ್ರಮ-ಮಾರ್ಗಶಿರ
ಶು|| ಷಷ್ಠೀ ಗುರುವಾರ
(ಬೆಂಗಳೂರು ನಗರ)

ಹೀಗೆ ವಿಜ್ಞಾಪಿಸುವ,

ಆರ್. ಎಸ್. ಶೇಷಗಿರಿರಾವ್.

# ತಪ್ಪು ಒಪ್ಪುಗಳು

| ಪುಟ. | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 28 | 6 | ಸ್ತ್ವಷ್ಠಾ | ಸ್ತ್ವಷ್ಟಾ. |
| 29 | 10 | ವಾಯುಸಂಸ್ಥಾ | ಪಾಯುತಿ |
| 32 | 2 | ಮೇವ | ವೇವ |
| 40 | 4 | ಧ್ಯಾನಿಲ್ಪಡುವರು | ಧ್ಯಾನಿಸಲ್ಪಡುವರು. |
| 41 | 1 | ಕುಂಜಿತ | ಕುಂಚಿತ |
| 41 | 11 | ಪತ್ರಾಬ್ದೇಷ್ವಪಿ | ಪತ್ರಾಬ್ಜೇಷ್ವಪಿ. |
| 49 | 14 | ಮುದ್ದಿಷ್ಠ : | ಮುದ್ದಿಷ್ಟಃ |
| 49 | 15 | ಮೊದಬಾವ | ಮೊದಲಾವ |
| 50 | 5 | ವರ್ಣಾಶ್ರಮಾಚರಾ | ವರ್ಣಾಶ್ರಮಾಚಾರ |
| 51 | 1 | ವಾಣಿ | ವಾಣೀ |



ಪ್ರಕಟೀಕೃತ ಟೀಕೋಕ್ತಿಃ ಮರ್ಕಟೀಕೃತ ಮಾಯಿರಾಟ್ ।
ಚಕ್ರತಾತ್ವ್ಯಾಸತತ್ವಜ್ಞ ಮಸ್ಕರೇಂದ್ರೋ ಕೃಪಾಂ ಮಯಿ ॥



ವೇಣೀಸೋಮಪುರದಲ್ಲಿರುವ

ಶ್ರೀ ವ್ಯಾಸತತ್ವಜ್ಞತೀರ್ಥರ

ವೃಂದಾವನ.

ಶ್ರೀ ಗುರುಭ್ಯೋನಮಃ

# ಗ್ರಂಥಕರ್ತರ ಲಘುಪರಿಚಯ

---

ಪ್ರಕಟೀಕೃತ ಟೀಕೋಕ್ತಿಃ ಮರ್ಕಟೀಕೃತ ಮಾಯಿರಾಟ್ ।
ಚಕ್ರತಾತ್ವ್ಯಾಸತತ್ವಜ್ಞ ಮಸ್ಕರೀಂದ್ರೋ ಕೃಪಾಂ ಮಯಿ ॥
ವಂದೇಹಂ ವ್ಯಾಸತತ್ವಜ್ಞಂ ನಿಂದಿತಾಖಿಲ ದುರ್ಮತಿಮ್ ।
ನಂದಿತಾಖಿಲ ಸದ್ವೃಂದಂ ನಂದಸೂನು ಪದಾರ್ಚಕಮ್ ॥

ಈ ಶ್ಲೋಕಗಳಿಂದಲೂ, ಇವರ ಸ್ತುತ್ಯಾತ್ಮಕವಾದ ಅಷ್ಟಕದಿಂದಲೂ, ಇವರು ಬರೆದಿರುವ ಗ್ರಂಥಗಳ ಪರಿಚಯದಿಂದಲೂ ಮತ್ತು ಶ್ರೀ ಗೋಪಾಲ ದಾಸರು, ಅವರ ತಮ್ಮಂದಿರಿಬ್ಬರು ಮತ್ತು ಶ್ರೀ ಜಗನ್ನಾಥದಾಸರು ರಚಿಸಿರುವ ಕೆಲವು ಪದಗಳಿಂದಲೂ ಇವರು ಉತ್ಕೃಷ್ಟ ಮಹಿಮರೆಂದೂ ಗೀತೆಯ ಎರಡನೆಯ ಅಧ್ಯಾಯದಲ್ಲಿ ಹೇಳಿರುವಂತೆ "ಸ್ಥಿತಪ್ರಜ್ಞ" ರೆಂದು ನಿಶ್ಚಯ ವಾಗುವುದು. ಇವರು ವಾಸಿಸುತ್ತಿದ್ದ ವೇಣೀಸೋಮಪುರವು ತುಂಗಭದ್ರಾ ನದಿಯ ಉತ್ತರತೀರದಲ್ಲಿ ನೈಜಾಂ ಇಲಾಖೆಯ ಗದ್ವಾಲೆ ಸಂಸ್ಥಾನಕ್ಕೆ ಸೇರಿ ಅದಕ್ಕೆ ಮೂವತ್ತು ಮೈಲಿ ದೂರದಲ್ಲಿರುವುದು. ಈ ಗ್ರಾಮದ ಉತ್ತರ ದಿಕ್ಕಿನಲ್ಲಿ ಸ್ತ್ರೀಯರ ಜಡೆಯಂತೆ ಹೆಣೆದುಕೊಂಡಿರುವ ಸಣ್ಣ ಸಣ್ಣ ಕಪ್ಪು ಬಂಡೆಗಳಿರುವುದರಿಂದ ಇದಕ್ಕೆ ವೇಣೀಸೋಮಪುರವೆಂದು ಪ್ರಸಿದ್ಧಿ ಬಂದಿರು ವುದು. ಇವರಿಗಿಂತ ಮುಂಚೆ ಇಲ್ಲಿ ಬ್ರಾಹ್ಮಣರೇ ಇರದೆ ಕೇವಲ ಮುಸಲ್ಮಾನರ ವಾಸಾರ್ಹವಾಗಿತ್ತು. ಇವರೇ ತಮ್ಮ ಶಿಷ್ಯ ಮತ್ತು ಪರಿವಾರದಿಂದೊಡಗೂಡಿ ಇಲ್ಲಿ ವಾಸಮಾಡಲಿಕ್ಕೆ ಶ್ರೀ ಪ್ರಾಣದೇವರ ಮತ್ತು ಗೋಪಾಲಕೃಷ್ಣನ ಅಪ್ಪಣೆ ಯಂತೆ ಬಂದು ಸೇರಿದರು. ಈ ಮಹಾತ್ಮರ ವೃಂದಾವನ ಪ್ರವೇಶದವರೆ ವಿಗೂ ಮತ್ತು ಮುಂದೆ ಕೆಲವು ವರ್ಷಗಳವರೆಗೂ ತುಂಬಾ ಉತ್ಕೃಷ್ಟ ರೀತಿ ಯಿಂದಿದ್ದು ಈಗ ಇವರ ವಂಶೀಯರ ಮನೆಗಳು ಮಾತ್ರವಿದ್ದು ಎರಡು ಗಂಡು ಸಂತತಿಯವರೂ ಮತ್ತು ಒಂದು ಹೆಣ್ಣು ಸಂತತಿಯವರೂ ಇರುವರು. ಇದು

ಚ್ಯವನಋಷಿಗಳ ಆಶ್ರಮವು. ತಪೋಯೋಗ್ಯವಾದುದು. ಈ ಸ್ಥಳವು ಈ ಮಹಾತ್ಮರಿಂದಲೇ ಉತ್ತಮ ಕ್ಷೇತ್ರವಾಗಿದೆ.

ಇಲ್ಲಿ ಇವರ ವೃಂದಾವನವು, ಇವರಿಂದಲೇ ಸ್ಥಾಪಿತವಾದ ಶ್ರೀ ವೇಣುಗೋಪಾಲಕೃಷ್ಣ ದೇವಾಲಯವು ಮತ್ತು ಇವರ ಸಂತತಿಯವರಿಂದ ಪ್ರತಿಷ್ಠಿತವಾದ ಶ್ರೀ ಷೋಡಷಬಾಹು ನರಸಿಂಹ ದೇವಾಲಯವೂ ಇರುವುವು. ಇವರ ವಂಶೀಯರು ಶ್ರೀಹಯಗ್ರೀವ, ಲಕ್ಷ್ಮೀ ಮತ್ತು ಶ್ರೀಕೋದಂಡರಾಮ ಪ್ರತಿಮೆಗಳನ್ನು ಪ್ರತಿಷ್ಠಾಮಾಡಿರುವರು.

ಇವರು ತೊಂಭತ್ತಾರು ವರ್ಷಗಳು ಇದ್ದು (1728ನೇ ಶಕ 1800-8-12)ರೌದ್ರಿ ಸಂ॥ ಶ್ರಾವಣ ಬ॥ ಅಷ್ಟಮಿ ಮಂಗಳವಾರ ವೃಂದಾವನ ಪ್ರವೇಶಿಸಿದರೆಂದು "ತೆರಳಿದರು ವ್ಯಾಸತತ್ವಜ್ಞರಿಂದು। ಪುರುಷೋತ್ತಮನ ಗುಣಗಳರುಪಿ ಸುಜನರಿಗೆ ॥ಪ॥ ವರರೌದ್ರಿನಾಮ ಸಂವತ್ಸರ ಶ್ರಾವಣ ಪರಪಕ್ಷ ಅಷ್ಟಮಿ ಭೌಮವಾರ ಭರಣೀ ನಕ್ಷತ್ರ ಪ್ರಾತಃ ಕಾಲದಲಿ ಸೋಮಪುರದಲಿ ಗೋಪಾಲಕೃಷ್ಣನ ಸನ್ನಿಧಿಗೆ" ಎಂಬ ಶ್ರೀ ಜಗನ್ನಾಥದಾಸಕೃತ ಪದದಿಂದ ನಿಶ್ಚಯವಾಗುವುದು. ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು, ಪಂಗನಾಮ ತಿಮ್ಮಣ್ಣಯ್ಯನವರು, ಶ್ರೀ ಜಗನ್ನಾಥದಾಸರು, ಮೊದಲಾದ ಮಹಾತ್ಮರು ಇವರ ಸಮಕಾಲದವರು.

ಇವರು ಪ್ರಥಮದಲ್ಲಿ ದ್ರುಪದರಾಜನ ಅಭಿಲಾಷೆ ಪೂರೈಸಲು ಯಜ್ಞಕಾಲದಲ್ಲಿ ಅಗ್ನಿಕುಂಡದಿಂದ ಶ್ರೀ ದ್ರೌಪದೀದೇವಿಯ ಅಗ್ರಜರಾಗಿ ಸಕವಚ ಕಿರೀಟಕುಂಡಲ ಆಯುಧಧರರಾಗಿ ಧೃಷ್ಟದ್ಯುಮ್ನನೆಂಬ ನಾಮದಿಂದ ಬಂದ ಅಗ್ನ್ಯಂಶರು. ಭಾರತಯುದ್ಧ ಕಾಲದಲ್ಲಿ ತನ್ನ ಪ್ರತಿಜ್ಞೆಯಂತೆ ಶಸ್ತ್ರಸನ್ಯಾಸಮಾಡಿ ಲಯಚಿಂತನೆಮಾಡುತ್ತಾ ಹರಿಪರಾಯಣರಾಗಿರುವಾಗ ಕೌರವಸೇನಾಧಿಪತಿ ದ್ರೋಣಾಚಾರ್ಯನನ್ನು ತನ್ನ ಕತ್ತಿಯಿಂದ ಈ ಧೃಷ್ಟದ್ಯುಮ್ನನು ಕೊಂದನೆಂಬುದು ಶ್ರೀ ಭಾರತದಿಂದ ತಿಳಿಯಬರುವುದು. ಅವರಲ್ಲಿ ವಿದ್ಯಾಭ್ಯಾಸಮಾಡಿ ಅವರನ್ನು ಕೊಂದದ್ದು ಅಪರಾಧವಲ್ಲವೆ? ಅದರ ಪರಿಹಾರಕ್ಕಾಗಿಯೋ ಎಂಬಂತೆ ಈ ಭೂಮಿಯಲ್ಲಿ (1) ಶ್ರೀ ಚಂದ್ರಿಕಾ

ಚಾರ್ಯರ ಶಿಷ್ಯರಾದ ಶ್ರೀನಿವಾಸತೀರ್ಥರು, (2) ಶ್ರೀ ವೇದವ್ಯಾಸತೀರ್ಥರ (ಪೆನುಕೊಂಡೆಯಲ್ಲಿ ವೃಂದಾವನ) ಶಿಷ್ಯ ಶ್ರೀಕೃಷ್ಣದ್ವೈಪಾಯನ ತೀರ್ಥರು (ಭೀಮಾನದೀತೀರ ಕುಸುಮವೃತ್ತಿಯೆಂಬಲ್ಲಿ ವೃಂದಾವನ). ಮತ್ತು ಶ್ರೀ ಭುವನೇಂದ್ರತೀರ್ಥ ಶಿಷ್ಯ ಶ್ರೀ ವ್ಯಾಸತತ್ವಜ್ಞರೆಂಬ ನಾಮಗಳಿಂದ ಅವತರಿಸಿದರು. ತಮ್ಮ ತಪಸ್ಸು, ಸಚ್ಛಾಸ್ತ್ರದ ಅಭ್ಯಾಸ, ಪ್ರವಚನ, ಮತ್ತು ಗ್ರಂಥರಚನೆ ಮೊದಲಾದ ಪುಣ್ಯಕರ್ಮಗಳಿಂದಲೂ, ಶ್ರೀಶನ ಅಪರೋಕ್ಷ ದರ್ಶನದಿಂದಲೂ ಇವರ ಪಾಪಕರ್ಮವು ದೂರೀಕೃತವಾಯಿತು – ಹೀಗೆಂದು ಬಲ್ಲ ಜಾಣರು ಅಂದಿರುವರು.

ಇವರ ಹಿರಿಯರ ವಾಸಸ್ಥಳವು ಹೈದರಾಬಾದ್ (ಭಾಗ್ಯನಗರ) ದೇಶಕ್ಕೆ ಸೇರಿದ ರಾಯಚೂರು ತಾಲ್ಲೂಕು ದಿನ್ನೆ ಎಂಬ ಗ್ರಾಮವು. ಜೋಯಿಸವೃತ್ತಿಯಿಂದ ಜೀವಿಸುತ್ತಿದ್ದ ಆಪಸ್ತಂಭ ಶಾಖೆಯ ಕೌಶಿಕಗೋತ್ರದ ವೆಂಕಟನರಸಿಂಹಾಚಾರ್ಯರು ಇವರ ತಂದೆಗಳು. ಇವರು ಚತುಶ್ಶಾಸ್ತ್ರ ಪಂಡಿತರಾಗಿ ಆಗಿನ ಕಾಲದಲ್ಲಿ ವಿದ್ವಾಂಸರಿಗೆ ಆಶ್ರಯರಾಗಿದ್ದ ಗದ್ವಾಲಿ ಸಂಸ್ಥಾನದ ರಾಜರ ಆಶ್ರಯದಿಂದ ಇನಾಮು ಗ್ರಾಮ ಭೂಮಿಗಳನ್ನು ಹೊಂದಿ ಗದ್ವಾಲೆಯಿಂದ 30 ಮೈಲಿಯಲ್ಲಿಯೂ, ಸೋಮಪುರದಿಂದ 9 ಮೈಲಿಯಲ್ಲಿಯೂ ಇರುವ ಐಜಿ ಎಂಬ ಗ್ರಾಮದಲ್ಲಿ ಪಾಠಪ್ರವಚನ ನಿರತರಾಗಿದ್ದರು. ಇವರ ತಪೋಫಲರೂಪವಾಗಿ ಶ್ರೀ ವೆಂಕಟೇಶನ ಪ್ರಸಾದದಿಂದ ಪ್ರಸ್ತುತ ಕಥಾ ನಾಯಕರಾದ ಶ್ರೀ ವೆಂಕಟರಾಮಾರ್ಯರು ಅರಣಿಯಿಂದ ಅಗ್ನಿಯು ಬಂದಂತೆ ಜನಿಸಿದರು. ಇವರ ಕುಲದೈವನು ಕೊಪ್ಪ ಶ್ರೀ ನರಸಿಂಹನು. ಹೀಗಿದ್ದರೂ ಐಜಿಗೆ 8–9 ಮೈಲಿ ದೂರದಲ್ಲಿರುವ ಆದಿಶಿಲೆ (ಮೊದಲುಕಲ್ಲು) ಎಂಬ ಕ್ಷೇತ್ರದಲ್ಲಿರುವ ಸ್ವಯಂವ್ಯಕ್ತ ಶ್ರೀ ವೆಂಕಟೇಶನನ್ನು ತಮ್ಮ ಕುಲ ಮತ್ತು ಇಷ್ಟ ದೇವನಂತೆ ಸೇವಿಸುತ್ತಿದ್ದರು.

ಆದಿಗ್ರಾವಾಖ್ಯ ಖೇಟಸ್ಥ ಗಿರಿಶಾಚಲ ವಾಸಿನಂ।
ಮಾಯಾದೂರಂ ಗುಣೈಃ ಪೂರ್ಣಂ ಸದಾ ದೋಷ ವಿವರ್ಜಿತಂ ॥
ಗುರುಪಾದೋಪದೇಶಾಪ್ತ ಸುಧಾರ್ಥಜ್ಞಾನದಂ ಹಿ ಮೇ ।
ಮುಕ್ತಸೇವ್ಯಂ ಪ್ರಮಾಕಾರಂ ಶ್ರೀನಿವಾಸಂ ಭಜೇಽನಿಶಂ॥

ಗೃಹಸ್ಥಾಶ್ರಮದಲ್ಲಿಯೇ ಇವರ ಪಾದರಕ್ಷೆಯ ಮಹಿಮೆಯನ್ನು ಮನ ಗಂಡ ಇವರ ಶಿಷ್ಯರಾದ ಅಡವೀ ಆಚಾರ್ಯರು (ಮಾನವೂರು ಶ್ರೀ ವಿಷ್ಣು ತೀರ್ಥರು) ಮುಂದಿನ ಶ್ಲೋಕದಲ್ಲಿ ಇವರ ಮಹಿಮೆಯನ್ನು ಕೊಂಡಾಡಿರು ವರು.

ದಿಕ್ಕ್ರಾಂತಾ ತತಪುಣ್ಯಕೀರ್ತಿ ಸುಲತಾ ಸಂಶೋಭಿತಸ್ಸಂತತಂ ।
ನಾನಾಶಿಷ್ಯ ತದೀಯಶಿಷ್ಯ ವಿಲಸಚ್ಛಾಖೋಪ ಶಾಖಾನ್ವಿತಾಃ ॥
ಐಜೀ ವೆಂಕಟನರಸಿಂಹ ದಯಿತಾ ದಿವ್ಯಾಲವಾಲೋದ್ಭವಃ ।
ಸಂಭೂಯಾತ್ಸಕಲೇಷ್ಟ ದೋ ಮಮ ಸದಾ ರಾಮಾರ್ಯ ಕಲ್ಪದ್ರುಮಃ ।

ಈ ಅಡವೀ ಆಚಾರ್ಯರಿಂದ ಶ್ರೀನರಸಿಂಹ ಮಂತ್ರ ಜಪಮಾಡಿಸಿ ತಮ್ಮ ಪುತ್ರರಿಗೆ ಪ್ರಾಪ್ತವಾಗಿದ್ದ ಅಪಮೃತ್ಯು ಪರಿಹರಿಸಿದರು. ಆಗ ಅಭಿ ಷೇಕಕ್ಕಿಟ್ಟಿದ್ದ ಹಾಲು ಮೊಸರು ಮೊದಲಾದುವನ್ನು ಅಡವೀ ಆಚಾರ್ಯರು ಪಾನಮಾಡಿದ್ದನ್ನು ನೋಡಿ ಜಿಗುಪ್ಸೆ ಮಾಡಿದ ಇತರರಿಗೆ ಶ್ರೀಕೃಷ್ಣನ ಮುಖದಿಂದ ಪಂಚಾಮೃತ ಬರುವುದನ್ನು ತೋರಿಸಿದರು. 12 ಆವರ್ತಿ ಸುಧಾಪ್ರವಚನ ಮಾಡಿದ್ದರು. ಆಗಿನ ರಾಜರು ಇವರ ವಿದ್ಯಾಭಿವೃದ್ಧಿ ಕಾರ್ಯಕ್ಕಾಗಿ ಹತ್ತು ಸಾವಿರ ರೂಪಾಯಿಗಳ ಆದಾಯವಿರುವ ಇನಾಮು ಗ್ರಾಮ ಭೂಮಿಗಳನ್ನು ಕೊಟ್ಟರು. ಅವು ಈಗಲೂ ತತ್ಸಂತತಿಯವರ ಅನು ಭವದಲ್ಲಿರುವುವು.

ತಿರುಪತಿಯ ರಥೋತ್ಸವ ಕಾಲದಲ್ಲಿ ಇವರು ತಮ್ಮ ನಿತ್ಯ ಪದ್ಧತಿ ಯಂತೆ ಮೂತ್ರ ವಿಸರ್ಜನೆಗಾಗಿ ಕೆಳಕ್ಕೆ ಇಳಿದು ಬಂದಿದ್ದರು. ಇವರು ಮೇಲೆ ಬಂದು ರಥಸ್ಥ ಶ್ರೀನಿವಾಸನ ಎದುರಿಗೆ ಬರುವವರೆವಿಗೂ ನಿಂತಲ್ಲಿಯೇ ಇದ್ದು ಇವರನ್ನು ಕರೆಸಿಕ್ಕೊಂಡು ಮುಂದೆ ಹೊರಟನು. ಆಗ ಇವರು **"ಯಾತರವ ನಾನಯ್ಯ"** ಎಂದು ಪದವನ್ನು ಹಾಡಿರುವರು.

ಹೀಗೆ ಇವರು ಲೋಕವಿಖ್ಯಾತರಾಗಿದ್ದರೂ ಶ್ರೀಶನ ಬಿಂಬಾಪರೋಕ್ಷ ವಿಲ್ಲದಿರಲು ಶ್ರೀ ಗೋಪಾಲದಾಸರ ಪ್ರೇರಣೆಯಂತೆ ತುರೀಯಾಶ್ರಮವನ್ನು ಸ್ವೀಕರಿಸಲು ಆಶಿಸಿ ತುಂಗಭದ್ರಾ ನಡುಗಡ್ಡೆಯಲ್ಲಿ ಕೆಲವು ದಿನಗಳು ವಾನ ಪ್ರಸ್ಥಾಶ್ರಮವನ್ನು ಅನುಷ್ಠಾನಮಾಡಿ ಗುರುಗಳಾದ ಶ್ರೀ ಭುವನೇಂದ್ರರ

ಆಜ್ಞೆಯಂತೆ ಶ್ರೀ ಭಾಗವತ ಸಪ್ತಮಸ್ಕಂಧಕ್ಕೆ ಮಂದನಂದಿನೀ ಎಂಬ ವ್ಯಾಖ್ಯಾನವನ್ನು ಬರೆದು ಸಮರ್ಪಿಸಿ ಉತ್ತಮ ಮುಹೂರ್ತದಲ್ಲಿ ಆಶ್ರಮ ಸ್ವೀಕರಿಸಿದರು. ಇವರು ಸಂಸ್ಥಾನದ ಬಯಕೆ ಉಳ್ಳವರಾಗಿರಲಿಲ್ಲವೆಂಬುದಕ್ಕೆ ಇವರಿಗೆ ಗುರುಗಳಿಟ್ಟಿರುವ "ಶ್ರೀವ್ಯಾಸ ತತ್ವಜ್ಞರು" ಎಂಬ ನಾಮವೇ ಸಾಕ್ಷಿಯು. ನಂತರ ಆರಾವರ್ತಿ ಸುಧಾಪಾಠ ಹೇಳಿರುವರು. ದಾಸರೊಡನೆ ಇರುವಾಗ ಪಾಠಗಳು ಹೇಳುವಾಗ ಶ್ರೀಕೃಷ್ಣನು ಗೋವುಗಳೊಡನೆ ಆಡಿ ಬರುತ್ತಿರುವುದನ್ನು ನೋಡಿ **"ಬಂದ ಕೃಷ್ಣ ಚಂದದಿಂದ ಬಂದಾ ನೋಡೈ"** ||ಪ|| ಎಂಬ ಪದವನ್ನು ಹಾಡಿರುವರು.

ತಮಗೆ ಶ್ರೀಶನ ಬಿಂಬ ದರ್ಶನವಾದಾಗ **"ಎಂದು ನಿನ್ನ ಪದ ಕಂಡೆ ಸ್ವಾಮಿ ಎಂದಿಗೆ ನಿನ್ನ ಪದ ಕಂಡೆ, ಭಕುತಿಯಿಂದ ಅಂದೇ ಭವಪಾಶ ತುಂಡೆ"** ||ಪ|| ಎಂದು ಹಾಡಿರುವರು. ಇವರಿಗೆ ಆಶ್ರಮಕೊಡುವ ಕಾಲದಲ್ಲಿ ಗುರುಗಳು ಕೊಟ್ಟ ಶ್ರೀಷೋಡಷಬಾಹು ನರಸಿಂಹ ಪ್ರತಿಮೆಯು ಬಂದಾಗ **"ಮುದುಕಿಯ ಕೈಯಲ್ಲಿ ಪುಲಿ ವಶವಾದಂತೆ। ಮುದಡನ ಕೈಯಲ್ಲಿ ಸಿಕ್ಕಿದ್ಯೊ ನರಹರಿ"** ||ಪ|| ಎಂದು ಅಂದಿರುವರು.

ಇವರ ಗುರುಗಳ ವೃಂದಾವನವು ಶ್ರೀಕೃಷ್ಣಾನದಿಯ ತೀರದ ರಾಜೋಳಿ ಎಂಬ ಗ್ರಾಮದಲ್ಲಿರುವುದು. ಆ ವೃಂದಾವನ (ಶ್ರೀಭುವನೇಂದ್ರರ)ದ ವಿಷಯದಲ್ಲಿಯೂ ಮತ್ತು ಇವರ ಪರಮ ಶಿಷ್ಯರಾದ ಶ್ರೀ ಸುಬೋಧೇಂದ್ರರಿಗೆ ಸಂಸ್ಥಾನ ಪ್ರಾಪ್ತಿವಿಷಯದಲ್ಲಿ ಪ್ರಾಪ್ತವಾಗಿದ್ದ ಕಲಹವನ್ನೂ ಪರಹರಿಸಿದರು. ಆಗಲೇ ನೈಜಾಂ ನವಾಬರ ದಂಡು ಕೃಷ್ಣಾನದಿಯಲ್ಲಿ ಬಂದು ನಿಂತಿತ್ತು. ರಾಜನ ಪ್ರಾರ್ಥನೆಯಿಂದ

**"ಧರ್ಮೋ ಭವತು ಸದ್ಧರ್ಮಃ ಮಾರ್ಗಣಾಃ ಸಂತು ಮಾರ್ಗಣಾಃ।**
**ವಾಹಿನೀ ವಾಹಿನೀ ರಾಜ್ಞ ಸ್ಯಾದರಾತಿ ಪರಾಜಯಃ॥"**

ಎಂಬ ಶ್ಲೋಕವನ್ನು ಬರೆದು ಕಳುಹಿಸಿ ಆ ವೈಶಾಖ ಮಾಸದಲ್ಲಿ ಅಪಾರ ಪ್ರವಾಹ ಬಂದು ಶತ್ರುಸೈನ್ಯ ನಾಶವಾಯಿತು. ಹರ್ಷಿತನಾದ ರಾಜನು ಇವರಿಗೆ ವರ್ಷಕ್ಕೆ 2,500/- ರೂ. ಆದಾಯ ಬರುತ್ತಿದ್ದ ಯಕಲಾಸಪುರವೆಂಬ

ಗ್ರಾಮವನ್ನು ಇನಾಮು ಹಾಕಿ ಕೊಟ್ಟಿರುವನು. ಅದು ಈಗಲೂ ಇವರ ಸಂತತಿಯವರ ಸ್ವಾಧೀನದಲ್ಲಿಯೇ ಇರುವುದು.

ನಿತ್ಯವೂ ಅಲ್ಲಿಯೂ ವೇಣೀಸೋಮಪುರದಿಂದ ನೆಲದಲ್ಲಿನ ಸುರಂಗ ಮಾರ್ಗದಿಂದ ಚಾಗದೋಣಿ ಎಂಬಲ್ಲಿಗೆ ಹೋಗಿಬರುತ್ತಿದ್ದರು. ತಮ್ಮ ಮಂತ್ರಾಕ್ಷತೆಯ ಬಲದಿಂದ ನರಸಪ್ಪನೆಂಬ ಶುಂಠನಿಂದ ದಿಗ್ವಿಜಯಿಗಳಾದ ಪಂಡಿತರ ಪರಾಜಯಮಾಡಿಸಿ ಆತನಿಗೆ ಜ್ಞಾನವು ಸ್ಥಿರವಾಗಿರುವಂತೆ ಮಾಡಿದರು. ತಮ್ಮ ಶಿಷ್ಯನಿಗೆ ಪ್ರಾಪ್ತವಾಗಿದ್ದ ಬ್ರಹ್ಮರಾಕ್ಷಸ ಜನ್ಮ ಕಳೆದರು. ಐಜಿಯ ಸಮೀಪದಲ್ಲಿರುವ ಹಳ್ಳಕ್ಕೆ ಗರುಡನದಿಯೆಂದು ನಾಮಕರಣಮಾಡಿದರು. ತಮ್ಮ ಕಾಲುಬೆರಳಿಗೆ ಉಂಟಾಗಿದ್ದ ವ್ರಣವು ಅಪರಿಹಾರ್ಯವಾಗಿರಲು, ಅದನ್ನು ಜ್ಞಾನದೃಷ್ಟಿಯಿಂದ ತಿಳಿದು ಅಲ್ಲಿದ್ದ ಬಡಗಿಯಿಂದ ಆ ಬೆರಳನ್ನು ಕತ್ತರಿಸಿ ತಾವು ಆತನಿಗೆ ಹಿಂದೊಂದು ಜನ್ಮದಲ್ಲಿ ಹೀಗೆ ಮಾಡಿದ್ದರೆಂದು ಹೇಳಿದರು.

ಇವರ ಮಹಿಮೆ ಅಪಾರವಾದುದು. ನನ್ನಂಥ ಅಲ್ಪನಿಗೆ ಇಷ್ಟಾದರೂ ಬರೆಯುವುದಕ್ಕೆ ಅವರ ಅನುಗ್ರಹವೇ ಕಾರಣ. ಇವರ ವಿಸ್ತಾರ ಚರಿತೆಯನ್ನು, ಇವರಿಂದಲೇ ರಚಿತವಾದ ಮತ್ತು ದಾಸಶ್ರೇಷ್ಠರಿಂದ ರಚಿತವಾದ ದೇವರನಾಮುಗಳ ಸಹಾಯದಿಂದ ಬರೆಯುವ ಕಾರ್ಯವು ನಡೆದಿದೆ.

ಈ ಮಹಾತ್ಮರು, ತಿರುಪತಿ ಶ್ರೀ ವೆಂಕಟೇಶನು ವಿದ್ಯಾ, ಧನ, ಸಂತಾನ ಮುಕ್ತಿ ಮೊದಲಾದ ಸಕಲ ಪುರುಷಾರ್ಥಪ್ರದಾಯಕನೆಂಬುದನ್ನು, ಈ ಕಲಿಯುಗದ ಐವತ್ತನೆಯ (ಕ್ರಿ. ಶ. 18) ಶತಮಾನದಲ್ಲಿ ಪ್ರತ್ಯಕ್ಷ ನಿದರ್ಶನಕ್ಕೆ ತಂದಿರುವರು.

**"ಯೊ ವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ ಸೋಽಶ್ನುತೆ ಸರ್ವಾನ್ ಕಾಮಾನ್"** ಎಂಬ ತೈತ್ತರೀಯ ಶ್ರುತಿಯ ಅರ್ಥವು ಇವರಲ್ಲಿ ಮನಗಂಡಿರುವುದು.

ಹೀಗೆ ವಿಜ್ಞಾಪಿಸುವ,

ಸುಜನ ವಿಧೇಯ,

ಕಲ್ಯಾಣಪುರೀ,
5-12-1940

ಆರ್. ಎಸ್. ಶೇಷಗಿರಿರಾವ್.

[illegible] ಲಬ್ಧವಾಗಿ ವೇಣೀಸೋಮಪುರದಲ್ಲಿ ಪ್ರತಿಷ್ಠಿತವಾದ ಶಿಲ್ಪಶಾಸ್ತ್ರ ವಿರುದ್ಧ



ಬಲದ ಪಾದದಮೇಲೆ ಎಡದ ಪಾದವಿರುವ
ಶ್ರೀ ರುಕ್ಮಿಣೀ ಸತ್ಯಭಾಮಾ ಸಮೇತ
**ಶ್ರೀ ವೇಣುಗೋಪಾಲಕೃಷ್ಣನ**
ಶಿಲಾ ವಿಗ್ರಹವು.



ಶ್ರೀ ವ್ಯಾಸತತ್ವಜ್ಞ ತೀರ್ಥರಿಂದ ಉಪಾಸ್ಯಮಾನವಾದ
**ಷೋಡಶಬಾಹು ಶ್ರೀ ನೃಸಿಂಹದೇವರ**
ಶಿಲಾ ವಿಗ್ರಹವು.



ಶ್ರೀ ಗುರುಭ್ಯೋನಮಃ.

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋನಮಃ.

ಶ್ರೀ ವೆಂಕಟೇಶಾಯನಮಃ.

ಶ್ರೀಮದ್ಬೈಜೀ

ವೆಂಕಟರಾಮಾಚಾರ್ಯ (ಶ್ರೀವ್ಯಾಸತತ್ವಜ್ಞ) ಕೃತ

# ಮಾನಸ ಸ್ಮೃತಿ(ಮಾನಸಧ್ಯಾನ ಪದ್ಧತಿ)ಯು.



ಶ್ರೀಮಧ್ವಹೃದಯಾನಂದಂ ವೇಂಕಟೇಶಂ ಭಜೇನಿಶಮ್ ।
ಜಯಾರ್ಯಾದಿ ಗುರೂನ್ವಂದೇ ಸದಾಸುಜ್ಞಾನಸಿದ್ಧಯೇ ॥ ೧ ॥

ನತ್ವಾ ಶ್ರೀವ್ಯಾಸತತ್ವಜ್ಞಮುನಿ ಮಿಷ್ಟಾರ್ಥದಾಯಕಮ್ ।
ಶ್ರೀಮಾನಸಸ್ಮೃತೇರ್ವ್ಯಾಖ್ಯಾಂ ಕರಿಷ್ಯಾಮ್ಯದ್ಯಭಾಷಯಾ ॥ ೨ ॥

ಸಂಸಾರತಾಪ ಸಂತಪ್ತರಾದ ಸುಜೀವರಿಗೆ ತತ್ತಾಪಪರಿಹಾರಕನಾದ -ಶ್ರೀನಾರಾಯಣನ ಅಪರೋಕ್ಷ ಜ್ಞಾನದಾಯಕವಾದ ಈ ಶ್ರೀಮಾನಸ ಸ್ಮೃತಿ ಎಂಬ ಗ್ರಂಥರಾಜವನ್ನು ರಚಿಸಲು ಉದ್ದೇಶಿಸಿದ ಶ್ರೀಮದ್ಬೈಜೀ ವೆಂಕಟರಾಮಾರ್ಯರೆಂಬ ವಿದ್ವದ್ವರೇಣ್ಯರು, ಆದಿಯಲ್ಲಿ ತಮ್ಮ ಇಷ್ಟ ಮತ್ತು ಕುಲದೇವನಾದ ಶ್ರೀನಿವಾಸನ ವಂದನೆಯನ್ನು ಮಾಡಿ ಉದ್ದೇಶವನ್ನು ಹೇಳುವರು.

ಓಂ॥ ಶ್ರೀನಿವಾಸ ಪದಾಂಭೋಜ ಯುಗಂ ನತ್ವಾ ಗುರೋ ರಪಿ ।
ಶ್ರೀಶ ಮಾನಸಿಕಧ್ಯಾನ ವಿಧಿಂ ವಕ್ಷ್ಯೇಯಥಾಮತಿ ॥ ೧ ॥

ಶ್ರೀನಿವಾಸನ ಪಾದಾಂಬುಜದ್ವಯವನ್ನು ಮತ್ತು ಗುರುಗಳ ಚರಣ ಕಮಲದ್ವಂದ್ವವನ್ನು ನಮಸ್ಕರಿಸಿ, ಶ್ರೀಲಕ್ಷ್ಮೀಪತಿಯಾದ ನಾರಾಯಣನನ್ನು ಮನಸ್ಸಿನಲ್ಲಿಯೇ ಧ್ಯಾನಮಾಡುವ ವಿಧಾನವನ್ನು, ನನ್ನ ಬುದ್ಧಿಯನ್ನನುಸರಿಸಿ ಅಥವಾ ಅಭ್ಯಾಸಮಾಡುವವರ ಯೋಗ್ಯತೆಯನ್ನನುಸರಿಸಿ ಹೇಳುವೆನು.

ಅವಃ—ತನ್ನ ನಿತ್ಯ ಸ್ನಾನಾಹ್ನಿಕಗಳನ್ನು ಮಾಡಿದನಂತರ ಏಕಾಂತ ದಲ್ಲಿ ಕುಳಿತು ಪ್ರಥಮದಲ್ಲಿ ಮಾನಸಿಕಸ್ನಾನಮಾಡುವ ವಿಧಿಯನ್ನು ಹೇಳು ವರು :—

ಶ್ರೀಶ ಪಾದಾಂಬುಜಾಸಕ್ತೋ ಮಾನಸಂ ಸ್ನಾನಮಾಚರೇತ್ ।
ಸ್ವದೇಹಾಂತರ್ಗತಾ ನಾಡ್ಯಃ ಪಿಂಗಳೇಲಾ ಸುಷುಮ್ನಕಾಃ ॥ ೨ ॥

ಶ್ರೀಶನ ಪಾದಕಮಲಗಳ ಭಜನಾಪೇಕ್ಷೆಯುಳ್ಳವನು ಮೊದಲು ಮಾನಸಸ್ನಾನವನ್ನು ಮಾಡುವುದು. ತನ್ನ ದೇಹದೊಳಗೆ ಪಿಂಗಳಾ, ಇಳಾ ಮತ್ತು ಸುಷುಮ್ನಾ ಎಂಬ ಮೂರು ನಾಡಿಗಳಿರುವವು.

ಪಿಂಗಳಾ ಯಮುನಾಪ್ರೋಕ್ತಾ ಇಳಾ ಗಂಗಾ ಪ್ರಕೀರ್ತಿತಾ ।
ತಯೋ ರಂತಸ್ಥಿತಾ ನಾಡೀ ಸುಷುಮ್ನಾಖ್ಯಾ ಸರಸ್ವತೀ ॥ ೩ ॥

ಪಿಂಗಳಾನಾಡಿಯು ಯಮುನಾನದಿಯು, ಇಳಾನಾಡಿಯು ಗಂಗಾ ನದಿಯು; ಇವೆರಡರ ಮಧ್ಯದಲ್ಲಿರುವ ಸುಷುಮ್ನಾನಾಡಿಯೇ ಸರಸ್ವತೀ ನದಿಯು.

ಸುಷುಮ್ನಾಸ್ಥಿತಸದ್ಜ್ಞೇಯ ಹೃತ್ಪದ್ಮಹೃದವಾಸಿನಃ ।
ಶ್ರೀಹರೇ ರ್ಧ್ಯಾನ ಸಲಿಲಂ ಮಾನಸಂ ತೀರ್ಥ ಮುತ್ತಮಮ್ ॥೪॥

ಸುಷುಮ್ನಾ ನಾಡಿಯಲ್ಲಿರುವ, ಸತ್ಪುರುಷರಿಂದ ತಿಳಿಯಲ್ಪಡಲರ್ಹನಾದ ಹೃದಯಕಮಲ ಸರಸ್ಸಿನಲ್ಲಿ ವಾಸಿಸುತ್ತಿರುವ ಶ್ರೀಹರಿಯ ಧ್ಯಾನೋದಕವು ಉತ್ತಮ ಮಾನಸತೀರ್ಥವು.

**ತತ್ತೀರ್ಥಸ್ನಾನನಿಷ್ಪಂಕಃ ಶುದ್ಧಶ್ಚೈಕಾಂತದೇಶಗಃ ।**
**ಸಮಾಚಲಾ ಸನಾಸೀನ ಸ್ತದ್ಗತೈಕಾಗ್ರ ಮಾನಸಃ ॥ ೫ ॥**

ಆ ತೀರ್ಥೋದಕದಿಂದ ಸ್ನಾನಮಾಡಿ ಕಶ್ಮಲರಹಿತನಾಗಿ ಶುದ್ಧನಾಗಿ, ಏಕಾಂತ ಸ್ಥಳದಲ್ಲಿ, ಸಮವಾದ, ಚಲಿಸದ – (ಸ್ವಸ್ತಿಕ, ಪದ್ಮ) ಆಸನದಲ್ಲಿ ಕುಳಿತು, ಆತನಲ್ಲಿ ಅರ್ಪಿಸಿದ ಏಕಾಗ್ರಮನಸ್ಸುಳ್ಳವನಾಗುವುದು.

**ಚಿಂತಯೇದಾತ್ಮನೋ ದೇಹಮೀಶಾಧಿಷ್ಠಾನಮುದ್ಭುತಮ್ ।**
**ತ್ವಕ್ಚರ್ಮಮಾಂಸರುಧಿರ ಮೇದೋಮಜ್ಜಾಸ್ಥಿನಾಮಕಾಃ ॥ ೬ ॥**

ತನ್ನ ಶರೀರವನ್ನು, ಶ್ರೀಶನು ಇರಲು ಯೋಗ್ಯವಾದ ಉತ್ತಮ ಸ್ಥಾನ ವೆಂದು ತಿಳಿಯುವುದು; ಈ ದೇಹದಲ್ಲಿ, ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು, ಮಜ್ಜೆಯು ಮತ್ತು ಎಲುಬು ಎಂಬ ಏಳು ಧಾತುಗಳಿರು ವುವು.

**ಪಂಚಭೂತಾತ್ಮಕಾಃ ಸಪ್ತ ಧಾತವಶ್ಚೈತದಾತ್ಮಕಮ್ ।**
**ಮನೋ ಮುಖ್ಯೇಂದ್ರಿಯಾಯತ್ತಂ ತತ್ವಾತ್ಮಕಮಿತಿಸ್ಫುಟಂ ॥ ೭ ॥**

ಈ ಏಳು ಧಾತುಗಳು, ಭೂಮಿ, ನೀರು, ಅಗ್ನಿ, ವಾಯು ಮತ್ತು ಆಕಾಶವೆಂಬ ಐದು ಭೂತಗಳಿಂದ ಆದವು; ಇವುಗಳಿಂದ ಕೂಡಿದುದು ದೇಹವು; ಮನವೇ ಮೊದಲಾದ ಇಂದ್ರಿಯಗಳಿಗೆ ಆಶ್ರಯವಾಗಿಯೂ ಮತ್ತು ಅಧೀನವಾಗಿಯೂ ಇರುವುದರಿಂದ, ಈ ದೇಹವು ತತ್ವಮಯವೆಂದು ಸ್ಪಷ್ಟವು.

**ಸಪ್ತಧಾತುಷು ಧಾತ್ವಂತಃ ಕ್ರಮಾತ್ಕೋಶಾಃ ಪ್ರತಿಷ್ಠಿತಾಃ ।**
**ಅನ್ನಪ್ರಾಣ ಮನೋವಿಜ್ಞಾ ನಾನಂದಮಯ ನಾಮಕಾಃ ॥ ೮ ॥**

ಈ ಏಳು ಧಾತುಗಳಲ್ಲಿ ಒಂದೊಂದರೊಳಗೂ, ಕ್ರಮವಾಗಿ ಅನ್ನ ಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಮತ್ತು ಆನಂದ ಮಯವೆಂಬ ಐದು ಕೋಶಗಳಿರುವುವು.

**ತನ್ನಾಮಕಾನಿರುದ್ಧಾದಿ ರೂಪಾಣ್ಯೇಷು ವಿಚಿಂತಯೇತ್ ॥**

ಈ ಕೋಶಗಳಲ್ಲಿ - ಆದರದರ ನಾಮದಿಂದಲೇ ಪ್ರಸಿದ್ಧವಾದ, ಶ್ರೀ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ನಾರಾಯಣ ಎಂಬ ಐದು ರೂಪಗಳನ್ನು ಚೆನ್ನಾಗಿ ಧ್ಯಾನಿಸಬೇಕು.

**ಭೂಮಿಸ್ಥಮನ್ನನಾಮಾನಂ ಪ್ರಾಣಮಗ್ನ್ಯಾದಿಸಂಸ್ಥಿತಮ್ ॥ ೯ ॥**

**ಮಾನಸಂ ಮನ ಆದಿಸ್ಥಂ ವಿಜ್ಞಾನಂ ಮಹತಿಸ್ಥಿತಮ್ ॥**
**ಆನಂದಮವ್ಯಕ್ತಗತಂ ಕ್ರಮಶೋಯಾಂತಿದೇವತಾಃ ॥ ೧೦ ॥**

ದೇಹದ ಭೂಭಾಗದಲ್ಲಿ ಅನ್ನಮಯ ಕೋಶವೂ, ಅಲ್ಲಿ ಪ್ರಾಣಾಂತರ್ಗ ತನಾದ ಶ್ರೀ ಅನಿರುದ್ಧ ದೇವನೂ, ಅಗ್ನಿಯ ಭಾಗದಲ್ಲಿ ಪ್ರಾಣಮಯ ಕೋಶವೂ, ಅಲ್ಲಿ ಅಪಾನಾಂತರ್ಗತ ಪ್ರದ್ಯುಮ್ನನೂ, ಮನವೇ ಮೊದಲಾದ ಸ್ಥಳಗಳಲ್ಲಿ, ಮನೋಮಯ ಕೋಶವೂ, ಅಲ್ಲಿ ವ್ಯಾನಾಂತರ್ಗತ ಸಂಕರ್ಷ ಣನೂ, ಮಹತ್ತತ್ವದಲ್ಲಿ ವಿಜ್ಞಾನಮಯ ಕೋಶವೂ, ಅಲ್ಲಿ ಉದಾನಾಂತ ರ್ಗತ ವಾಸುದೇವನೂ, ಮತ್ತು ಅವ್ಯಕ್ತತತ್ವದಲ್ಲಿ ಆನಂದಮಯ ಕೋಶವೂ ಅಲ್ಲಿ ಸಮಾನಾಂತರ್ಗತ ಶ್ರೀ ನಾರಾಯಣನೂ ಇರುವರೆಂದು ತಿಳಿಯು ವುದು.

**ಏವಂ ಕೋಶಸ್ಥಿತಾಶ್ಚಕ್ಷುಶ್ಶ್ರೋತ್ರವಾಙ್ಮಯನಾಮಕಾಃ ॥**

ಹೀಗೆ ಕೋಶಗಳಲ್ಲಿ ಚಕ್ಷು, ಶ್ರೋತ್ರ - ವಾಙ್ಮಯ ಎಂಬ ದೇವತೆ ಗಳಿರುವರು.

ತೇಷ್ವಸ್ಯಾನ್ಯದಿತಾನ್ಯೇತ ನ್ನಾಮಕಾನಿ ರಮಾಪತೇಃ ।
ಚಿಂತನೀಯಾನಿ ರೂಪಾಣಿ ತೈತ್ತರೀಯೋದಿತಾನಿಚ ॥ ೧೧ ॥

ಅವುಗಳಲ್ಲಿ ವ್ಯಾಪ್ತನಾದ, ತೈತ್ತರೀಯೋಪನಿಷತ್ತಿನಲ್ಲಿ ಹೇಳಿರುವ ಆಯಾಯ ನಾಮದ ಶ್ರೀಲಕ್ಷ್ಮೀಪತಿ ನಾರಾಯಣನ ರೂಪವಿಶೇಷಗಳನ್ನು ಧ್ಯಾನಿಸುವುದು.

ಧಾತೂಪರಿಷ್ಠಾದಾಪಾದಮೌಳಿ ಪರ್ಯಂತಮಾತತಮ್ ।
ವಾಸುದೇವಾಭಿಧಂರೂಪಂ ಚಿಂತಯೇತ್ಕಚಾಕೃತಿಮ್ ॥ ೧೨ ॥

ಚರ್ಮದ ಮೇಲ್ಭಾಗದಲ್ಲಿ - ಕಾಲಿನಿಂದ ತಲೆಯುವರಿವಿಗೂ ವಿಸ್ತಾರ ವಾಗಿರುವ - ವಾಸುದೇವರೂಪವು - ಕವಚದಂತೆ ಇದೆಯೆಂದು - ತಿಳಿಯು ವುದು.

ಏವಮಾಮೌಳಿಪಾದಾಂತಂ ಧ್ಯೇಯಂನಾರಾಯಣಾಭಿಧಮ್।
ದಶೈತತ್ಕವಚರೂಪಾಣಿಜ್ಞಾತ್ವಾದೋಷೈರ್ನಲಿಪ್ಯತೆ ॥ ೧೩ ॥

ಹೀಗೆ ತಲೆಯಿಂದ ಕಾಲಿನವರೆವಿಗೂ ನಾರಾಯಣನನ್ನು ಧ್ಯಾನಿಸು ವುದು, ಹೀಗೆ ಕವಚರೂಪನಾದ ಶ್ರೀ ನಾರಾಯಣನ ಹತ್ತು ರೂಪಗಳನ್ನು ತಿಳಿದವರಿಗೆ ದೋಷಗಳ ಲೇಪವಾಗುವುದಿಲ್ಲ.

ದೇಹೆ ತ್ರಿಕೋಟಿಕೋಟ್ಯೋರ್ಧ್ವ ರೋಮಕೂಪಾಭವಂತಿಹಿ ।
ಹಿಂಕಾರನಾಮಕಸ್ತೇಷು ವ್ಯಾಪ್ತಃ ಪ್ರದ್ಯುಮ್ನಕೋಹರಿಃ ॥ ೧೪ ॥

ಈ ದೇಹದಲ್ಲಿ ಮೂರೂವರೆಕೋಟಿ ರೋಮಕೂಪಗಳಿರುವುವು ; ಅವು ಗಳಲ್ಲಿ ಹಿಂಕಾರವೆಂಬ ಪ್ರಸಿದ್ಧನಾದ - ಪ್ರದ್ಯುಮ್ನನೆಂಬ ಶ್ರೀಹರಿಯು ತುಂಬಿ ರುವನು.

**ಸಾರ್ಧತ್ರಿಕೋಟಿತೀರ್ಥಾನಿ ರೋಮಕೂಪ ಸ್ಥಿತಾನಿಚ ।**
**ತನ್ನಿಯಾಮಕರೂಪಾಣಿ ಚಿಂತನೀಯಾನಿ ಚಕ್ರಿಣಃ ॥ ೧೩ ॥**

ಈ ರೋಮಕೂಪಗಳಲ್ಲಿ - ಮೂರೂವರೆಕೋಟಿ ತೀರ್ಥಗಳು - ತದಭಿಮಾನಿ ದೇವತೆಗಳು ಇರುವರು ; ಅವುಗಳಲ್ಲಿ ನಿಯಾಮಕವಾದ ಅಷ್ಟೆ ಚಕ್ರಧಾರಿಯಾದ ಶ್ರೀ ಹರಿಯ ರೂಪಗಳನ್ನು ತಿಳಿಯುವುದು.

**ತ್ವಚಿಸ್ಥಿತೋऽನಿರುದ್ಧಶ್ಚವೇದ್ಯಃ ಪ್ರಸ್ತಾವನಾಮಕಃ ।**
**ರಾಮರೂಪೋಽಪಿ ತತ್ರೈವ ಲಾವಣ್ಯಾದಿ ಪ್ರದೋ ಹರಿಃ ॥ ೧೬ ॥**

ತ್ವಕ್ಕಿನಲ್ಲಿ (ಮೇಲಿನ ಚರ್ಮದ ಒಳಗಡೆಯ ಭಾಗ) ಪ್ರಸ್ತಾವನೆಂಬ ಶ್ರೀ ಅನಿರುದ್ಧನನ್ನು - ತಿಳಿಯುವುದು ; ಅಲ್ಲಿಯೇ ಸೌಂದರ್ಯಾದಿಗಳನ್ನು ಚೆನ್ನಾಗಿ ಕೊಡುವ ರಾಮರೂಪಿಯಾದ ಶ್ರೀ ಹರಿಯು - ಇರುವನು.

**ಚರ್ಮಣ್ಯುದ್ಗೀಥ ನಾಮಾ ಸೌವೇದ್ಯಃ ಪ್ರದ್ಯುಮ್ನ ನಾಮಕಃ ।**
**ಲಕ್ಷ್ಮೀಪತಿಶ್ಚ ತತ್ರೈವ ಮಹಾ ವ್ರಣನಿವಾರಕಃ ॥ ೧೭ ॥**

ಚರ್ಮದಲ್ಲಿ - ಉದ್ಗೀಥನೆಂಬ – ಪ್ರದ್ಯುಮ್ನನನ್ನು ತಿಳಿಯುವುದು ; ಅಲ್ಲಿಯೇ ಶ್ರೀ ಲಕ್ಷ್ಮೀಪತಿಯು– ಮಹಾ ವ್ರಣಗಳನ್ನು ಪರಿಹರಿಸುವವನಾಗಿ ಇರುವನು.

**ಮಾಂಸಸ್ಥಃ ಪ್ರತಿಹಾರಾಖ್ಯಃ ಚಿಂತ್ಯಃ ಸಂಕರ್ಷಣೋಽಚ್ಯುತಃ ।**
**ವರರೂಪೀಚ ತತ್ರಾಪಿ ವಿಷ್ಣುಃ ಪುಷ್ಟಿ ವಿವರ್ಧನಃ ॥ ೧೮ ॥**

ಮಾಂಸದಲ್ಲಿ - ಪ್ರತಿಹಾರನೆಂಬ – ಚ್ಯುತಿರಹಿತನಾದ ಶ್ರೀ ಸಂಕರ್ಷಣನನ್ನು–ಧ್ಯಾನಮಾಡುವುದು ; ಅಲ್ಲಿಯೂ, ಪುಷ್ಟಿಯನ್ನು–ವೃದ್ಧಿಗೊಳಿಸುತ್ತಾ-ವರರೂಪದಿಂದಿರುವನು.

**ರುಧಿರಸ್ಥೋ ವಾಸುದೇವ ಶ್ಚಿಂತ್ಯಶ್ಚೋಪದ್ರವಾಭಿಧಃ ||**
**ಶಾಂತ ಸಂವಿದ್ಧ ರಿಶ್ಚಾಪಿ ಶಾರೀರಬಲ ಸಾರದಃ ||೧೯||**

ರಕ್ತದಲ್ಲಿರುವ – ಉಪದ್ರವನೆಂಬ ವಾಸುದೇವನನ್ನು – ಧ್ಯಾನಿಸ ಬೇಕು; ಅಲ್ಲಿ ಶರೀರದ ಬಲ ಸಾರಪ್ರದನಾದ ಶಾಂತ ಸಂವಿತ್ – ಎಂಬ ಹರಿಯು ಇರುವನು.

**ಮೇದಸ್ಥೋ ನಿಧನೋ ನಾಮ ಧ್ಯೇಯೋ ನಾರಾಯಣೋ ವಿಭುಃ।**
**ತತ್ರೈವ ಷಡ್ಗುಣೋ ವಿಷ್ಣುಃ ಐಶ್ವರ್ಯಾದಿಗುಣಪ್ರದಃ ||೨೦||**

ಮೇದಸ್ಸಿನಲ್ಲಿ - ನಿಧನ ನಾಮಕನಾದ, ಸಮರ್ಥನಾದ ನಾರಾಯಣ ನನ್ನು–ಧ್ಯಾನಮಾಡುವುದು–; ಅಲ್ಲಿಯೂ, ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು–ಮೊದಲಾದ ಆರು ಗುಣಗಳಿಂದ ಪೂರ್ಣನಾದ – ಐಶ್ವರ್ಯಾದಿ ಗುಣದಾಯಕನಾದ ಶ್ರೀ ವಿಷ್ಣುವನ್ನು–ತಿಳಿಯುವುದು.

**ಮಜ್ಜಾ ಸ್ಥಿತೋ ವಷಟ್ಕಾರಃ ಸಾರಾತ್ಮಾಚ ವ್ಯವಸ್ಥಿತಃ।**
**ಮದಸ್ಯ ಜನನಾದೇವ ಮಜ್ಜಾ ನಾಮಾನಿ ವೈ ಹರೇಃ ||೨೧||**

ಮಜ್ಜೆಯಲ್ಲಿ – ವಷಟ್ಕಾರನೆಂಬ ಸಾರಾತ್ಮನಾಮಕನಾದ ಹರಿಯು ಇರುವನು ; ಮದಜನಕನಾದುದರಿಂದಲೇ ಅವನನ್ನು ಮಜ್ಜಾ ಎಂದು ಹೇಳುವರು.

**ಚಿಂತನೀಯಮಾನಿ ರೂಪಾಣಿ ಸಷಷ್ಠಿ ತ್ರಿಶತಾನಿಚ।**
**ತಾನಿ ಸಂಧ್ಯಾ ದೈವತಾನಿ ದಿನ ಸಂಖ್ಯಾಮಿತಾನಿ ಚ ||೨೨||**

ಮತ್ತು ವರ್ಷಕ್ಕೆ ಆಗುವ – ಹಗಲುಗಳ ಸಂಖ್ಯೆಯಿಂದ ಕೂಡಿದ - ಸಂಧ್ಯೆಗೆ – ದೇವತೆಗಳಾದ - ಮುನ್ನೂರರವತ್ತು ಶ್ರೀಹರಿಯ ರೂಪಗಳನ್ನು ಚಿಂತಿಸುವುದು.

ಮಜ್ಜೈವರೇತೋ ಭವತಿ ತಸ್ಮಿನ್ಪ್ರಾಣಃ ಪ್ರತಿಷ್ಠಿತಃ ।
ಪ್ರಾಣೇ ನಾರಾಯಣ ಸ್ತಸ್ಮಾದ್ರೇತೋ ಗರ್ಭತ್ವ ಮೇಷ್ಯತಿ ॥೨೩॥

ಮಜ್ಜವೇ – ರೇತಸ್ಸಾಗುವುದು ; ಅದರಲ್ಲಿ ಪ್ರಾಣನಿರುವನು ; ಆತನಲ್ಲಿ - ಶ್ರೀ ನಾರಾಯಣನಿರುವನು ; ಆದುದರಿಂದ - ಆ ರೇತಸ್ಸು ಗರ್ಭ ಭಾವವನ್ನು ಹೊಂದುವುದು.

ಸಷಷ್ಠಿ ತ್ರಿಶತಾಸ್ಥಿಸ್ಥಂ ಹಂಸಂ ಚೈವಾದಿನಾಮಕಂ ॥
ಆಸ್ಥಾನಾದಸ್ಥಿ ನಾಮಾನಿ ಅಸ್ಥಿಷ್ವಾಚರಿತಾನಿ ಚ ॥೨೪॥

ಮುನ್ನೂರರವತ್ತು ಎಲಬುಗಳಲ್ಲಿ - ಶ್ರೀಹರಿಯ ಹಂಸಾದಿ ರೂಪ ಗಳಿರುವುವು ; !ಅಲ್ಲಿ ಚೆನ್ನಾಗಿ ಇದ್ದು ಆಶ್ರಯನಾಗಿರೋಣದ್ದರಿಂದ–"ಅಸ್ಥಿ" ಎಂಬ ಹೆಸರಿನಿಂದಲೇ ಅಲ್ಲಿ ವ್ಯಾಪ್ತನಾಗಿರುವನು.

ಸಷಷ್ಠಿ ತ್ರಿಶತಾನ್ಯೇವ ವಿಷ್ಣೋ ರೂಪಾಣಿ ಚಿಂತಯೇತ್ ।
ಏತಾನ್ಯೇವ ಸ್ವರೂಪಾಣಿ ರಾತ್ರೀಣಾಂ ದೇವತಾನಿ ಚ ॥೨೫॥

ಆ ವಿಷ್ಣುವಿನ - ಮುನ್ನೂರರವತ್ತು ರೂಪಗಳನ್ನು ಚಿಂತಿಸುವುದು ; ಇವೇ ರಾತ್ರಿಗಳ ಅಭಿಮಾನಿದೇವತೆಗಳ ಸ್ವರೂಪಗಳು.

ಪಾದ ಹಸ್ತಾಂಗುಲಿಸ್ಥಾನಿ ಯಾನಿ ಪರ್ವಾಣಿ ವಿಗ್ರಹೆ ।
ತತ್ಪರ್ವಸು ಪರಿಜ್ಞಾನಾ ತ್ಪರ್ವನಾಮಾನಿ ವೈ ಹರೇಃ ॥೨೬॥

ಕೈಕಾಲುಗಳ ಬೆರಳುಗಳಲ್ಲಿ ಪರ್ವಗಳಿವೆ (ಗಿಣ್ಣು) ಅವುಗಳಲ್ಲಿ - ಪರ್ವವೆಂಬ ಹರಿಯ ರೂಪಗಳನ್ನು ತಿಳಿಯುವುದು.

ಸಮ್ಯಕ್ ಸಷಷ್ಠಿ ತ್ರಿಶತ ಸ್ವರೂಪಾಣಿ ನಿಬೋಧಯೇತ್ ॥
ಏತಾನಿ ಪರ್ವರೂಪಾಣಿ ದಿನಾಹ್ನಾಂ ದೈವತಾನಿ ಚ ॥೨೭॥

ಅಲ್ಲಿ ಚೆನ್ನಾಗಿ ಒಂದೊಂದು ಪರ್ವದಲ್ಲಿ ಮುನ್ನೂರರವತ್ತು ರೂಪಗಳನ್ನು ತಿಳಿಯುವುದು, ಈ ಪರ್ವರೂಪಗಳು ದಿನದ ಹಗಲಿನ ದೇವತೆಗಳು.

**ಅಶೀತ್ಯುತ್ತರ ಸಾಹಸ್ರ ರೂಪಾಣ್ಯೇತಾನಿ ಸರ್ವಶಃ ।**
**ಯೋ ವಿಜಾನಾತಿ ತಸ್ಯೈವ ನಿತ್ಯ ಮಾಯು ರ್ವಿವರ್ಧತೆ ॥೨೮॥**

ಒಂದೊಂದು ಬೆರಳಿನಲ್ಲಿಯೂ ಒಂದು ಸಾವಿರದ ಎಂಭತ್ತು ರೂಪಗಳನ್ನು ಸರ್ವಕಡೆಗಳಲ್ಲಿಯೂ ಯಾರು ತಿಳಿಯುವರೋ ಅವರ ಆಯುಷ್ಯವು ನಿತ್ಯದಲ್ಲಿಯೂ ಅಭಿವೃದ್ಧಿಯಾಗುವುದು.

**ತತ್ತ್ವಾಭಿಮಾನಿನೋ ದೇವಾ ದೇಹೇऽಸ್ಮಿನ್ ನವಕೋಟಯಃ ।**
**ವಿಷ್ಣ್ವಾಜ್ಞಯಾ ಪ್ರವರ್ತಂತೆ ತತ್ತತ್ತತ್ತ್ವಾವಬೋಧಕಾಃ ॥೨೯॥**

ಈ ದೇಹದಲ್ಲಿ ಒಂಭತ್ತುಕೋಟಿ ತತ್ತ್ವಾಭಿಮಾನಿ ದೇವತೆಗಳಿರುವರು. ಶ್ರೀ ವಿಷ್ಣುವಿನ ಆಜ್ಞೆಯಿಂದ ಆಯಾಯ ತತ್ತ್ವಗಳನ್ನು ತಿಳಿಸುತ್ತಾ ಪ್ರೇರಿಸುತ್ತಿರುವರು.

**ಮುಖ್ಯಾಸ್ತೇಷ್ವಪಿ ವಿಜ್ಞೇಯಾ ಶ್ಚತುರ್ವಿಂಶತಿ ತತ್ವಕಾಃ ॥**
**ಕೇಶವಾದಿ ಚತುರ್ವಿಂಶ ನ್ಮೂರ್ತಯಸ್ತ ನ್ನಿಯಾಮಕಾಃ ॥೩೦॥**

ಮತ್ತು ಅವುಗಳಲ್ಲಿ, ಇಪ್ಪತ್ತುನಾಲ್ಕು ತತ್ವಾಭಿಮಾನಿ ದೇವತೆಗಳು ಅತಿ ಮುಖ್ಯರಾದವರೆಂದು ತಿಳಿಯುವುದು; ಆಚಮನ ಕಾಲದಲ್ಲಿ ಉಚ್ಚರಿಸಲ್ಪಡುವ ಶ್ರೀ ಕೇಶವನಿಂದ-ಶ್ರೀ ಕೃಷ್ಣನವರೆಗಿನ ಇಪ್ಪತ್ತುನಾಲ್ಕು ಭಗವದ್ರೂಪಗಳು ತನ್ನಿಯಾಮಕಗಳು.

ಆ ತತ್ವಗಳ, ತದಭಿಮಾನಗಳ ಮತ್ತು ತನ್ನಿಯಾಮಕ ಭಗವದ್ರೂಪಗಳ ನಾಮಗಳನ್ನು ಮುಂದೆ ಹೇಳುವಂತೆ ಭಾವಿಸುವುದು.

| ಸಂ. | ತತ್ವಗಳ ನಾಮ | ಅಭಿಮಾನಿ ದೇವತಾ ನಾಮ | ನಿಯಾಮಕ ಭಗವದ್ರೂಪ ತತ್ಪತ್ನೀನಾಮ ಸಹಿತ. |
|---|---|---|---|
| ೧. | ಅವ್ಯಕ್ತತತ್ವ | ಸರಸ್ವತೀ, ಭಾರತಿ, ಲಕ್ಷ್ಮೀ. | ಶ್ರೀ ಕೇಶವ. |
| ೨. | ಮಹತ್ತತ್ವ | ಬ್ರಹ್ಮ, ವಾಯು. | ಲಕ್ಷ್ಮೀನಾರಾಯಣ. |
| ೩. | ಅಹಂಕಾರತತ್ವ | ರುದ್ರ–ಗರುಡ–ಶೇಷ. | ಕಮಲಾ ಮಾಧವ. |
| ೪. | ಮನಸ್ತತ್ವ | ಇಂದ್ರಕಾಮರು. | ಪದ್ಮಾ ಗೋವಿಂದ. |
| ೫. | ಶ್ರೋತ್ರೇಂದ್ರಿಯ | ಚಂದ್ರ | ಪದ್ಮಾ ವಿಷ್ಣು. |
| ೬. | ಚಕ್ಷು | ಸೂರ್ಯ | ಕಮಲಾ ಮಧುಸೂದನ. |
| ೭. | ತ್ವಗಿಂದ್ರಿಯ | ಅಹಂಕಾರಿಕ ಪ್ರಾಣ | ರಮಾ ತ್ರಿವಿಕ್ರಮ |
| ೮. | ರಸನೇಂದ್ರಿಯ | ವರುಣ | ವೃಷಾಕಪಿ ವಾಮನ. |
| ೯. | ಘ್ರಾಣೇಂದ್ರಿಯ | ನಾಸತ್ಯದಸ್ರರು. | ಪ್ರಕೃತಿ ಶ್ರೀಧರ. |
| ೧೦. | ವಾಗಿಂದ್ರಿಯ | ಅಗ್ನಿ | ಬುದ್ಧೀ ಹೃಷೀಕೇಶ. |
| ೧೧. | ಪಾಣಿ | ದಕ್ಷಬ್ರಹ್ಮ. | ಯಜ್ಞಾ ಪದ್ಮನಾಭ. |
| ೧೨. | ಪಾದ | ಜಯಂತ. | ಇಂದಿರಾ ದಾಮೋದರ. |
| ೧೩. | ಪಾಯು | ಮಿತ್ರ | ಹಿರಣ್ಯಾ ಸಂಕರ್ಷಣ. |
| ೧೪. | ಉಪಸ್ಥ | ಸ್ವಾಯಂಭುವ ಮನು. | ಹರಿಣೀ ವಾಸುದೇವ. |
| ೧೫. | ಶಬ್ದ | ಪ್ರಾಣ | ಸತ್ಯಾ ಪ್ರದ್ಯುಮ್ನ. |
| ೧೬. | ಸ್ಪರ್ಶ | ಅಪಾನ | ನಿತ್ಯಾ ಅನಿರುದ್ಧ. |
| ೧೭. | ಗಂಧ | ವ್ಯಾನ | ಆನಂದಿನೀ ಪುರುಷೋತ್ತಮ. |
| ೧೮. | ರಸ | ಉದಾನ | ಅಸಂಜ್ಞಾ ಅಧೋಕ್ಷಜ. |
| ೧೯. | ರೂಪ | ಸಮಾನ | ಸುಖಾ ನೃಸಿಂಹ. |
| ೨೦. | ಆಕಾಶ | ಗಣಪತಿ | ಸುಗಂಧೀ ಅಚ್ಯುತ. |
| ೨೧. | ವಾಯು | ಪ್ರವಹವಾಯು | ಸುಂದರೀ ಜನಾರ್ದನ. |
| ೨೨. | ಅಗ್ನಿ | ಪಾವಕ | ವಿದ್ಯಾ ಉಪೇಂದ್ರ. |
| ೨೩. | ಅಪ್ಪು | ವರುಣ | ಸುಶೀಲಾ ಹರಿ. |
| ೨೪. | ಪೃಥ್ವೀ | ಧರಣೀ–ಶನೈಶ್ಚರ | ಸುಲಕ್ಷಣಾ ಶ್ರೀಕೃಷ್ಣ. |

ಪ್ರಾಣಸ್ತ್ವಗಾತ್ಮಾ ತತ್ರತ್ಯ ಶ್ಚಿಂತನೀಯೋ ನಿರುದ್ಧಕಃ।
ಅಜಾಂತೌ ಮೂರ್ಧ್ನಿ ವಿಜ್ಞೇಯಾ ವಾನಂದಸ್ತ್ವಭಿತೋಮುಖೇ॥೩೧॥

ತ್ವಗಿಂದ್ರಿಯಾಭಿಮಾನಿಯು ಪ್ರಾಣನಾಮಕ ವಾಯುವು; ಆತನಲ್ಲಿ ಅನಿರುದ್ಧನನ್ನು ತಿಳಿಯುವುದು; ಅಜ ಮತ್ತು ಅಂತ ಎಂಬ ಎರಡು ರೂಪಗಳನ್ನು ಶಿರಸ್ಸಿನಲ್ಲಿಯೂ, ಆನಂದನನ್ನು ಹಣೆಯಲ್ಲಿಯೂ ತಿಳಿಯುವುದು.

ಶ್ರೋತ್ರಾಭಿಮಾನಿನಶ್ಚಿಂತ್ಯಾ ದಿಗ್ದೇವಾಶ್ಚಂದ್ರಮಾ ಮುಖಾಃ ।
ಚಂದ್ರೆ ಬೃಹತ್ಪಾಂಡುಮಾಸೋ ಸೋಮರಾಜಾ ನಿಯಾಮಕಃ ॥೩೨॥

ಕಿವಿಗಳಿಗೆ ಮತ್ತು ಶಬ್ದವನ್ನು ಗ್ರಹಣಮಾಡುವ ಇಂದ್ರಿಯಕ್ಕೆ ಚಂದ್ರನೇ ಮೊದಲಾದ ದಿಗಭಿಮಾನಿದೇವತೆಗಳೇ ಅಭಿಮಾನಿಗಳು; ಚಂದ್ರನ ದೊಡ್ಡದಾದ ಬೆಳ್ಳಗಿರುವ ಪ್ರಕಾಶದಲ್ಲಿ ಸೋಮರಾಜನು ನಿಯಾಮಕನು.

ಧನ್ವಂತರಿ ಹಯಗ್ರೀವ ಶ್ಚಿಂತಾಮಣಿ ರಜಾದಯಃ ।
ಹಂಸೋಪಿ ವಾಮನಶ್ಚಿಂತ್ಯ ಉಗ್ರೋರ್ಜಾವಪಿ ಕರ್ಣಯೋಃ ॥೩೩॥

ಧನ್ವಂತರಿ, ಹಯಗ್ರೀವ, ಚಿಂತಾಮಣಿ, ಅಜ, ಹಂಸ, ವಾಮನ, ಉಗ್ರ ಮತ್ತು ಊರ್ಜ ಎಂಬ ಕ್ರಮವಾಗಿ, ಪೂರ್ವ, ಆಗ್ನೇಯ, ದಕ್ಷಿಣ, ನಿರಋತಿ, ಪಶ್ಚಿಮ, ವಾಯುವ್ಯ, ಉತ್ತರ ಮತ್ತು ಈಶಾನ್ಯವೆಂಬ ಎಂಟು ದಿಕ್ಕು ವಿದಿಕ್ಕುಗಳಿಗೆ ನಿಯಾಮಕವಾದ ಭಗವದ್ರೂಪಗಳನ್ನು ಆಯಾಯ ದಿಗಧಿಪತಿಗಳೊಡನೆ ಕಿವಿಗಳೆರಡರಲ್ಲಿ ತಿಳಿಯುವುದು.

ಹಯಗ್ರೀವಶ್ಚ ಸಂವೇದ್ಯೋ ದಿಙ್ವ್ಯಾಪ್ತೋ ದಿಙ್ನಿಯಾಮಕಃ ।
ವಿದಿಙ್ನಿಯಾಮಕಶ್ಚೈವ ವ್ಯಾಪ್ತಃ ಪ್ರದ್ಯುಮ್ನ ನಾಮಕಃ ॥೩೪॥

ಹಯಗ್ರೀವ ಮತ್ತು ಸಂವೇದ್ಯವೆಂಬ ಎರಡು ಶ್ರೀಹರಿ ರೂಪಗಳು ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ವ್ಯಾಪ್ತರಾದವರು ಮತ್ತು ತನ್ನಿಯಾಮಕರು; ಆಗ್ನೇಯಾದಿ ನಾಲ್ಕು ವಿದಿಕ್ಕುಗಳಿಗೆ, ಅಲ್ಲಿ ತುಂಬಿರುವ ಪ್ರದ್ಯುಮ್ನನು ನಿಯಾಮಕನು.

**ವಿಪ್ರದಕ್ಷಿಣ ಕರ್ಣೇಚ ಭಾಗೀರಥ್ಯಾದಿಕಾನಿ ಚ।**
**ತೀರ್ಥಾನಿ ನಿವಸಂತ್ಯ ಸ್ಮಾತ್ ಸ್ವಕರ್ಣ ಸ್ಪರ್ಶನಾಚ್ಛುಚಿಃ ||೩೫||**

ಬ್ರಾಹ್ಮಣರ ಬಲಗಿವಿಯಲ್ಲಿ, ಭಾಗೀರಥಿಯೇ (ಗಂಗೆ) ಮೊದಲಾದ ತೀರ್ಥಾಭಿಮಾನಿ ದೇವತೆಗಳಿರುವರು; ಆದುದರಿಂದ ಅದನ್ನು ಸ್ಪರ್ಶಮಾಡಿದರೆ ಶುಚಿಯಾಗುವನು. (ಕೆಲವು ಕಾಲದಲ್ಲಿ ಆಚಮನಕ್ಕೆ ಪ್ರತಿನಿಧಿಯಾಗಿ ಬಲಗಿವಿಯನ್ನು ಮುಟ್ಟುವುದೂ ಮತ್ತು ಜನಿವಾರವನ್ನು ಮೂತ್ರಪುರೀಷೋತ್ಸರ್ಜನ ಕಾಲದಲ್ಲಿ ಬಲಗಿವಿಗೆ ಹಾಕಿಕೊಳ್ಳುವುದೂ ರೂಢಿಯಲ್ಲಿದೆ.)

**ನೇತ್ರಯೋರಿಂದ್ರ ಈಶಶ್ಚ ಕ್ರಮಾದೇತೌ ಪ್ರತಿಷ್ಠಿತೌ ।**
**ಚಕ್ಷುರ್ದ್ವಯಾಭಿಮಾನೀಚ ಸೂರ್ಯಸ್ತಸ್ಮಿನ್ನಿಯಾಮಕಃ ||೩೬||**

ಬಲ ಮತ್ತು ಎಡಕಣ್ಣುಗಳಲ್ಲಿ ಇಂದ್ರ ಮತ್ತು ಈಶ ಎಂಬ ಎರಡು ಭಗವದ್ರೂಪಗಳಿರುವುವು; ಆ ಎರಡು ಕಣ್ಣುಗಳಿಗೂ ಸೂರ್ಯನು ಅಭಿಮಾನಿಯು. ಆ ಸೂರ್ಯನನ್ನೂ ಮತ್ತು ಚಕ್ಷುರಿಂದ್ರಿಯವನ್ನೂ ನಿಯಮಿಸುವನು.

**ನಾರಾಯಣ ಸ್ತ್ವತಿಷ್ಠಾಖ್ಯೋ ಮೂರ್ಧರಾಜೇತಿ ನಾಮಕಃ ||**
**ವಾಜಿನೀವಸ್ತ್ವಜಾದ್ಯಾಶ್ಚ ಕಪಿಲೋನ್ನಾಮುಖಾದಯಃ ||೩೭||**

ಅತಿಷ್ಠನೆಂಬ ನಾರಾಯಣನು ಮೂರ್ಧರಾಜನೆಂಬ ಹೆಸರಿನಿಂದ ಇರುವನು; ವಾಜನೀವಸು (ಕುದುರೆಯ ರೂಪ) ಅಜ, ಕಪಿಲ ಮೊದಲಾದ ರೂಪಗಳು ಇರುವುವು.

**ದಕ್ಷಿಣಾಕ್ಷಿ ಸ್ಥಿತೋ ವಿಷ್ಣು ಸ್ತಂಭರೂಪೀ ರಮಾಸ್ವಯಂ।**
**ರಜ್ಜುರೂಪತಯಾ ಬದ್ಧ್ವಾ ವಾಯುಂ ಗೋವತ್ಸರೂಪಿಣಮ್ ||೩೮||**

ಬಲಗಣ್ಣಿನಲ್ಲಿ ಶ್ರೀ ವಿಷ್ಣುವು ಸ್ತಂಭರೂಪನಾಗಿರುವನು; ಸಾಕ್ಷಾ ಲ್ಲಕ್ಷ್ಮೀದೇವಿಯು ಹಗ್ಗರೂಪವಾಗಿ ಅಕಳ ಕರುವಿನಂತಿರುವ ವಾಯುದೇವ ರನ್ನು ಬಂಧಿಸಿರುವಳು.

**ನಯನೇರಕ್ತ ರಾಜಿಸ್ಥೋ ರುದ್ರೋ ಗೌತಮನಾಮಕಃ ।**
**ಶ್ವೇತ ತಾರಾಗತಶ್ಚಂದ್ರೋ ವಸಿಷ್ಠಾಖ್ಯಃ ಸುರೇಶ್ವರಃ ॥೩೯॥**

ನೇತ್ರಗಳ ಕೆಂಪಿರುವ ಭಾಗದಲ್ಲಿ ಗೌತಮನೆಂಬ ರುದ್ರನಿರುವನು; ಬಿಳಿಯ ಗುಡ್ಡೆಯಲ್ಲಿ ವಸಿಷ್ಠನೆಂಬ ದೇವನಾಯಕನಾದ ಇಂದ್ರನು ಇರುವನು.

**ಕೃಷ್ಣ ತಾರಾಸ್ಥಿತೋ ವಹ್ನಿರ್ಜಮದಗ್ನಿ ರಿತಿಸ್ಮೃತಃ ।**
**ಕಾನೀನಿಕಾಯಾಮಾದಿತ್ಯೋ ವಿಶ್ವಾಮಿತ್ರಾಭಿಧಸ್ತಥಾ ॥೪೦॥**

ಕರಿಯ ಗುಡ್ಡೆಯಲ್ಲಿ ಜಮದಗ್ನಿ ಎಂಬ ಅಗ್ನಿಯೂ, ಕಾನೀನಿಕೆ ಯಲ್ಲಿ (The central point in the eye where the things are received; Doctors call it retina) ವಿಶ್ವಾಮಿತ್ರನೆಂಬ ಸೂರ್ಯನಿರುವನು.

**ವಾರಿಗೋ ವರುಣಃ ಸಾಕ್ಷಾದ್ಭರ ದ್ವಾಜಾಭಿಧಸ್ತಥಾ ॥**
**ಅಧರಾವರ್ತಿನೀ ಸಂಸ್ಥಾ ಪೃಥ್ವೀ ಕಾಶ್ಯಪೀ ನಾಮಿಕಾ ॥೪೧॥**

ನೀರಿನಲ್ಲಿ ಭರದ್ವಾಜನೆಂಬ ವರುಣನೂ, ಹಾಗೆಯೇ ಕೆಳಗಡೆ ರೆಪ್ಪೆ ಯಲ್ಲಿ-ಕಾಶ್ಯಪೀ ಎಂಬ ಪೃಥ್ವಿಯೂ ಇರುವರು.

**ದಕ್ಷಿಣಾಕ್ಷಿಸ್ಥಿತೋ ಜ್ಞೇಯೋ ವಿಶ್ವನಾಮಾನಿರುದ್ಧಕಃ ।**
**ದ್ವಿಪಾದಃ ಪಂಚ ಹಸ್ತೇತೋ ಮುಖ್ಯೈ ಗಜಕೇರಸ್ಮೃತಃ ॥೪೨॥**

ಬಲಗಣ್ಣಿನಲ್ಲಿ ವಿಶ್ವನಾಮಕನಾದ ಅನಿರುದ್ಧನಿರುವನೆಂದು ತಿಳಿಯುವುದು ; ಅವನಿಗೆ ಎರಡು ಕಾಲುಗಳು ಐದು ಕೈಗಳು-ಮಧ್ಯದ ಕೈ ಆನೆಯ ಸೊಂಡಿಲನಂತಿರುವುದು.

**ಏಕೋನ ವಿಂಶತಿ ಮುಖೋ ಮಧ್ಯೆ ಚೈಕಂ ಗಜಾನನಮ್ ।**
**ತತ್ಪಾರ್ಶ್ವಯೋ ರ್ನರಾಸ್ಯಾನಿ ಕ್ರಮಾದೇಕೋನವಿಂಶತಿಃ ॥೪೩॥**

ಮಧ್ಯದಲ್ಲಿ ಆನೆಯ ಮುಖದಂತೆಯೂ ಅದರ ಎರಡು ಪಕ್ಕಗಳಲ್ಲಿಯೂ ಒಂಭೂತ್ತೊಂಭತ್ತು ಮನುಷ್ಯರ ಮುಖದಂತೆಯೂ ಹೀಗೆ ಹತ್ತೊಂಭತ್ತು ಮುಖವುಳ್ಳವನು ವಿಶ್ವಮೂರುತಿಯು.

**ಏವಮದ್ಭುತರೂಪೋಸಾ ವಷ್ಟದಿಕ್ಪಾಲಸೇವಿತಃ ।**
**ಜೀವಾನಾಂ ಚ ಸದಾಜಾಗ್ರದವಸ್ಥಾ ಪ್ರೇರಕೋ ಹರಿಃ ॥೪೪॥**

ಇಂತಹ ಆಶ್ಚರ್ಯಕರ ರೂಪವುಳ್ಳ ಈ ಹರಿಯು, ಎಂಟು ದಿಕ್ಕುಗಳಿಗೆ ಪಾಲಕರಾದ, ಇಂದ್ರ, ಅಗ್ನಿ, ಯಮ, ನಿರಋತಿ, ವರುಣ, ವಾಯು, ಕುಬೇರ ಮತ್ತು ಈಶಾನನೆಂಬ ದೇವತೆಗಳಿಂದ ಯಾವಾಗಲೂ ಸೇವೆಯನ್ನು ಕೈಕೊಳ್ಳುತ್ತಾ ಸಕಲ ಜೀವರ ಜಾಗ್ರದವಸ್ಥೆಯನ್ನು ಪ್ರೇರಿಸುವನು.

**ತತಃ ಕಂಠಗತೋ ದಾನ ಸೇವಿತಸ್ತೈಜಸಾಭಿಧಃ ।**
**ಪ್ರದ್ಯುಮ್ನೋ ವಿಶ್ವವಜ್ಜ್ಞೇಯೋ ಮುಖಹಸ್ತಾದಿ ಸಂಯುತಃ ॥೪೫॥**

ಅನಂತರ ಕಂಠದಲ್ಲಿ (ಗಂಟಲ) ಉದಾನನಾಮಕ ವಾಯುವಿನಿಂದ ಸೇವಿತನಾದ ತೈಜಸನೆಂಬ ಪ್ರದ್ಯುಮ್ನನು ಹಿಂದೆ ಹೇಳಿದ ವಿಶ್ವನಂತೆಯೇ ಆಕೃತಿಯುಳ್ಳವನಾಗಿರುವನು.

**ಸಏವ ಸರ್ವಜೀವಾನಾಂ ಸ್ವಪ್ನಾವಸ್ಥೇರಕಃ ಪ್ರಭುಃ ।**
**ಹೃತ್ಪದ್ಮಕರ್ಣಿಕಾಗ್ರಸ್ಥ ಸ್ತ್ವಗ್ರೇಶಃ ಪ್ರಾಜ್ಞಸಂಜ್ಞಕಃ ॥೪೬॥**

ಈತನೇ ಸಕಲ ಜೀವರ ಸ್ವಪ್ನಾವಸ್ಥೆಯನ್ನು ಪ್ರೇರಿಸುವ ಪ್ರಭುವು-ಸರ್ವಜೀವರ ಹೃದಯಕಮಲದ ಕರ್ಣಿಕೆಯ ತುದಿಯಲ್ಲಿ ಪ್ರಾಜ್ಞನೆಂಬ ಅಗ್ರೇಶನು ಇರುವನು.

**ಸಂಕರ್ಷಣಃ ಸುಷುಪ್ತ್ಯಾದಿ ಪ್ರೇರಕಃ ಸಮುದಾಹೃತಃ ।**
**ವಿಶ್ವೋಜಾಗ್ರತ್ಸ್ಥಿತಾನರ್ಥಾನ್ ತೈಜಸಃ ಸ್ವಪ್ನಸಂಸ್ಥಿತಾನ್ ॥೪೭॥**

**ಪ್ರಾಜ್ಞಃ ಸುಷುಪ್ತಿಗಾನರ್ಥಾನ್ ಸ್ವೀಕರೋತಿ ಸೃಜನ್ವಿಭುಃ ।**
**ಜಾಗ್ರತ್ಸ್ವಪ್ನಸುಷುಪ್ತ್ಯಾದಿಕ್ರಮೋ ಯಮವಗಮ್ಯತಾಮ್ ॥೪೮॥**

ಸಂಕರ್ಷಣರೂಪೀ ಹರಿಯು ಸುಷುಪ್ತಿಯೇ ಮೊದಲಾದ ಅವಸ್ಥೆಗಳ ಪ್ರೇರಕನೆಂದು ನಿಶ್ಚಯವು; ಶ್ರೀ ವಿಶ್ವನು ಜಾಗ್ರದವಸ್ಥೆಯಲ್ಲಿನ ಪದಾರ್ಥಗಳನ್ನೂ, ತೈಜಸನು ಸ್ವಪ್ನಪದಾರ್ಥಗಳನ್ನೂ ಮತ್ತು ಪ್ರಾಜ್ಞನು ಸುಷುಪ್ತಿ ಪದಾರ್ಥಗಳನ್ನೂ ಉಂಟುಮಾಡಿ ತಾನು ಅನುಭವಿಸಿ ಜೀವರ ಅನುಭವಕ್ಕೆ ತಂದುಕೊಡುತ್ತಾನೆ. ಹೀಗೆ ಈ ಮೂರು ಅವಸ್ಥೆಗಳ ನಿಯಮನ ಕ್ರಮವನ್ನೂ ಮುಂದೆ ಹೇಳುವಂತೆ ತಿಳಿಯುವುದು.

**ವಿಶ್ವೋಗೃಹೀತ್ವಾ ಜೀವಸ್ಯ ಸ್ವಪ್ರಕಾಶ ವಿಶೇಷಕಮ್ ।**
**ಕಂಠದೇಶಂ ಸಮಾಗತ್ಯ ಸಂಶ್ಲಿಷ್ಟಸ್ತೈಜಸೇನ ಯತ್ ॥೪೯॥**

ಶ್ರೀ ವಿಶ್ವನು ಜೀವನ ಅಭಿಮಾನಾತ್ಮಕವಾದ ಹೊರಗಿನ ಪದಾರ್ಥಗಳ ಕಡೆಗೆ ಹೋಗುತ್ತಿರುವ ಲಕ್ಷ್ಯಾತ್ಮಕವಾದ ಪ್ರಕಾಶವನ್ನು ತಿರುಗಿಸಿಕೊಂಡು ಸ್ಥೂಲದೇಹದ ಕಂಠಕ್ಕೆ ಬಂದು ಅಲ್ಲಿರುವ ತೈಜಸನೆಂಬ ತನ್ನ ರೂಪದಲ್ಲಿ ತಾನು ಸೇರಿಕೊಂಡು ಈ ಜೀವನ ಪ್ರಕಾಶವನ್ನು ಆತನ ಅಧೀನಮಾಡುವನು.

**ತದಾತು ತೈಜಸಃ ಸಾಕ್ಷಾತ್ಪದಾರ್ಥಾನ್ವಾಸನಾಮಯಾನ್ ।**
**ದರ್ಶಯಿಷ್ಯತಿಜೀವಾಯ ಸ್ವಪ್ನಾವಸ್ಥಾ ತದುಚ್ಯತೇ ॥೫೦॥**

ಆಗ ಆ ತೈಜಸನು ಈ ಜೀವನಿಂದ ಜಾಗ್ರದವಸ್ಥೆಯಲ್ಲಿ ಇಂದ್ರಿಯ ಗಳಿಂದ ಅನುಭವಿಸಿದ್ದವುಗಳಿಗೆ ಸದೃಶವಾದ ವಾಸನಾಮಯವಾದ ವಿಷಯ ಪದಾರ್ಥಗಳನ್ನು ಜೀವನಿಗೆ ತೋರಿಸುತ್ತಾನೆ; ಇದನ್ನೇ ಸ್ವಪ್ನಾವಸ್ಥೆಯೆಂದು ಹೇಳುವರು.

ತೈಜಸಃ ಕಂಠದೇಶಾಚ್ಚ, ವಿಶ್ವೇನ ಸಹಲೀಲಯಾ ।
ತತ್ಪ್ರಕಾಶಂ ಸಮಾದಾಯ ಪ್ರಾಜ್ಞೇನಾಶ್ಲಿಷ್ಯತೆ ಹೃದಿ ||೩೧||

ಕಂಠಸ್ಥಾನದ ದೆಸೆಯಿಂದ ಆ ತೈಜಸನು ವಿಶ್ವನಿಂದ ಸಹಿತನಾಗಿ ಅನಾಯಾಸದಿಂದ ಆ ಜೀವಪ್ರಕಾಶವನ್ನು ತೆಗೆದುಕೊಂಡು ಪ್ರಾಜ್ಞನೊಡನೆ ಸ್ಥೂಲ ಹೃದಯಸ್ಥಾನದಲ್ಲಿ ಸೇರುವನು.

ತದಾತು ಹೃದ್ಗತಂ ಪ್ರಾಣಂ ಗಿಲಿತ್ವಾ ಜೀವಮಿಂದಿರಾ ।
ವಿಶೇತ್ತ ಮುದರೀಕೃತ್ಯ ಪ್ರಾಜ್ಞಮಾಲಿಂಗತೆ ರಮಾ ||೩೨||

ಆಗ ಆ ಹೃದಯದಲ್ಲಿರುವ ಪ್ರಾಣಸಹಿತನಾದ ಜೀವನನ್ನು ಇಂದಿರಾ ದೇವಿಯು ನುಂಗಿ ಉದರದಲ್ಲಿಟ್ಟುಕೊಂಡು ಆ ರಮಾದೇವಿಯು ಪ್ರಾಜ್ಞ ನನ್ನು ಆಲಿಂಗನೆ ಮಾಡಿಕೊಳ್ಳುವಳು.

ಆವಿಷ್ಕರೋತಿ ಜೀವಸ್ಯಪ್ರಾಜ್ಞಃ ಸ್ವಾನಂದ ವಿಪ್ರುಷಂ ।
ತಮೋಯೋಗ್ಯಸ್ಯ ಜೀವಸ್ಯ ಹ್ಯನಿತ್ಯಂ ಸೃಜತೆ ಸುಖಮ್ ||೩೩||

ಆಗ ಮುಕ್ತಿಯೋಗ್ಯನಾದ ಜೀವನಿಗೆ, ಈ ಪ್ರಾಜ್ಞನು, ಮುಕ್ತಿಯಲ್ಲಿ ಆಗುವ ಆನಂದಾನುಭವವನ್ನು ಹೊಂದಿಸುವನು; ಆದರೆ ತಮೋಯೋಗ್ಯ ಜೀವನಿಗೆ ಅನಿತ್ಯಸುಖವನ್ನು ಸೃಷ್ಟಿಮಾಡಿ ತೋರಿಸುವನು.

ಏವಂ ಜೀವಃ ಸುಷುಪ್ತ್ಯಾಂತರ್ನ ಬಾಹ್ಯಂ ವೇತ್ತಿ ಕಿಂಚನ ।
ತದಾ ಜಾಗರ್ತಿ ನೈಕಾನ್ಮಂ ರಮಮಾಣಪರೋಃ ಹರಿಃ ||೩೪||

ಹೀಗೆ ಸುಷುಪ್ತಿಯವಸ್ಥೆಯಲ್ಲಿ (ಸುಖನಿದ್ರೆಯಲ್ಲಿ) ಒಳಗಿನ ಮತ್ತು ಹೊರಗಿನ ಯಾವ ವಿಷಯದ ಜ್ಞಾನವೂ ಜೀವನಿಗೆ ಇರುವುದಿಲ್ಲ; ಆಗ ಶ್ರೀಹರಿಯು ತನ್ನ ಸ್ವೇಚ್ಛೆಯಿಂದ ಶ್ರೀದೇವಿಯೊಡನೆ ವಿಹರಿಸುವನು.

**ಸ ಏವ ಸುಪ್ತ ಜೀವಾನಾಂ ಹೃದಯೇಷು ವ್ಯವಸ್ಥಿತಃ ।**
**ಜ್ಞಾನೈಶ್ವರ್ಯ ಪ್ರದಾತೃತ್ವಾ ದ್ಭೂತಿನಾಮಾ ಪರೋ ಹರಿಃ ॥೫೫॥**

ಈತನೇ ನಿದ್ರೆಯಲ್ಲಿರುವ ಜೀವರ ಸ್ವರೂಪ ಹೃದಯದಲ್ಲಿರುವ ಹರಿಯು; ಜ್ಞಾನ ಮತ್ತು ಐಶ್ವರ್ಯದಾಯಕನಾದುದರಿಂದ "ಭೂತಿ" ಎಂದು ಹೇಳಲ್ಪಡುವನು.

**ಏವಂ ಸುಪ್ತೇತು ಸಜ್ಜೀವೇ ವಾಯ್ವಾದ್ಯಾ ಭೂತಿನಾಮಕಮ್ ।**
**ಭೂರಿತಿ ಶ್ವಾಸ ರೂಪೇಣ ಪ್ರಶಂಸಂತಿ ನಿರಂತರಮ್ ॥೫೬॥**
**ಅಭೂರಿತಿಚ ದುರ್ಜೀವೇ ಭೂ ಶಬ್ದೋ ಭೂತಿವಾಚಕಃ ॥**

ಹೀಗೆ ಸುಜೀವನು ಸುಖನಿದ್ರೆಯಲ್ಲಿರುವಾಗ ವಾಯುವೇ ಮೊದಲಾದ ಸಕಲ ತತ್ತ್ವಾಭಿಮಾನಿ ದೇವತೆಗಳೂ ಈ ಭೂತಿ ಎಂಬ ಶ್ರೀಹರಿಯನ್ನು "ಭೂಃ" ಎಂದು ಶ್ವಾಸಾದಿರೂಪದಿಂದ ಹೊಗಳುವರು; ದುರ್ಜೀವರಲ್ಲಿ ಈ ದೇವತೆಗಳು "ಅಭೂಃ" ಎಂದು ಹೇಳುವರು. ಭೂ ಎಂಬ ಪದವು ಜ್ಞಾನೈಶ್ವರ್ಯ ಆನಂದ ಮೊದಲಾದ ಪುರುಷಾರ್ಥದಾಯಕವಾದುದು; "ಅಭೂಃ" ಎಂಬ ಪದವು ತದ್ವಿರುದ್ಧಾರ್ಥವುಳ್ಳದ್ದು. ಇದನ್ನನುಸರಿಸಿ ನಿದ್ರೆಯ ಕಾಲದಲ್ಲಿ ಮುಕ್ತಿಯೋಗ್ಯಜೀವನು "ಭೂ" ಎಂದೂ ಮತ್ತು ತಮೋಯೋಗ್ಯಜೀವನು "ಅಭೂ" ಎಂದೂ ಗೊರಕೆ ಹೊಡೆಯುವರು. ಇದರ ಸಹಾಯದಿಂದ ಜೀವರ ಸ್ವರೂಪವನ್ನು ನಿರ್ಣಯಿಸಲು ಅನುಕೂಲವಾಗುವುದು.

**ಯೋ ವೇದಭೂತಿ ನಾಮಾನ ಮಚಿರಾದ್ಭೂತಿ**
**ಮಾಪ್ನುಯಾತ್ ॥೫೭॥**

ಯಾರು ಈ ಭೂತಿ ಎಂಬ ಶ್ರೀನಾರಾಯಣನನ್ನು ಇಂತಹ ಮಹಿಮೆಯುಳ್ಳವನೆಂದು ತಿಳಿಯುವರೋ ಅವರು ಅತಿ ಶೀಘ್ರವಾಗಿಯೇ ಜ್ಞಾನ, ಐಶ್ವರ್ಯ, ಆನಂದಾದಿ ಸಂಪತ್ತುಗಳನ್ನು ಹೊಂದುವರು.

ಪುನ ರ್ವಿಶ್ವಸ್ತೈಜಸೇನ ಸಾರ್ಧಂ ಜೀವಕಲಾವೃತಃ ।
ಕಂಠಂ ಸಮಾಗತೇ ಸ್ವಪ್ನಃ ಪುನರ್ಭವತಿ ತತ್ರ ಹಿ ॥೫೮॥

ಹೀಗೆಯೇ ಹಿಂದಕ್ಕೆ ತಿರುಗುವಾಗ ವಿಶ್ವನು ತೈಜಸನಿಂದ ಸಹಿತನಾಗಿ ಜೀವಪ್ರಕಾಶವನ್ನು ತೆಗೆದುಕೊಂಡು ಕಂಠದೇಶಕ್ಕೆ ಬರಲು ಮತ್ತು ಸ್ವಪ್ನವಾಗುವುದು.

ವಿಹಾಯ ತೈಜಸಂ ವಿಶ್ವೆ ಪುನಃ ಚಕ್ಷುಃ ಸಮಾಗತೆ ।
ತದಾ ಜಾಗ್ರದವಸ್ಥಾ ಸ್ಯಾ ದೇವಂ ವಿಜ್ಞೇಯ ಮಂಜಸಾ ॥೫೯॥

ತೈಜಸನನ್ನು ಅಲ್ಲಿಯೇ ನಿಲ್ಲಿಸಿ ವಿಶ್ವನು ಮತ್ತು ಕಣ್ಣಿಗೆ ಬರಲು ಆಗ ಜಾಗ್ರದವಸ್ಥೆಯುಂಟಾಗುವುದು; ದೇಹಿಯು ಎಚ್ಚರಹೊಂದುವನು; ಹೀಗೆ ಎಲ್ಲವನ್ನೂ ಚೆನ್ನಾಗಿ ತಿಳಿಯುವುದು.

ವಾಸುದೇವ ಸ್ತುರೀಯಾಖ್ಯಃ ಶೀರ್ಷೋಪರಿ ಸಮಾಸ್ಥಿತಃ ।
ಬ್ರಹ್ಮರಂಧ್ರಸ್ಥಿತ ಬ್ರಹ್ಮನಾಡ್ಯಾಂ ನಾರಾಯಣಃ ಸ್ಥಿತಃ ॥೬೦॥

ವಾಸುದೇವನೆಂಬ ತುರೀಯನು ತಲೆಯಮೇಲಿರುವನು; ಬ್ರಹ್ಮರಂಧ್ರದಲ್ಲಿರುವ ಬ್ರಹ್ಮನಾಡಿಯಲ್ಲಿ ಶ್ರೀ ನಾರಾಯಣನಿರುವನು.

ಆದಿತ್ಯನಾಮಕಶ್ಛಾಯ ಮಾದಾನಾತ್ಪುರುಷಾಯುಷಾಮ್ ।
ವಾಸುದೇವೋ ಹಿ ಭಗವಾನ್ ದಕ್ಷಿಣಾಕ್ಷಿ ಸ್ಥಿತೋ ನೃಣಾಮ್ ॥೬೧॥

ಈತನೇ ಜೀವರ ಆಯುಷ್ಯವನ್ನು ಅಳೆಯುವವನಾದುದರಿಂದ ಆದಿತ್ಯನೆಂದು ಪ್ರಸಿದ್ಧನಾಗಿರುವನು; ಮನುಜರ ಬಲಗಣ್ಣಿನಲ್ಲಿ ಐಶ್ವರ್ಯಾದಿ ಷಡ್ಗುಣಪೂರ್ಣನಾದ ಶ್ರೀ ವಾಸುದೇವನಿರುವನು.

**ವಾಸುದೇವೋ ಹಿ ಯಚ್ಚಕ್ಷುರ್ಮಂಡಲಾದುತ್ಕ್ರಮಿಷ್ಯತಿ।**
**ತದಾ ಪಶ್ಯತಿ ವೈ ಜೀವೋ ಮಂಡಲಂ ತು ವಿರಶ್ಮಿಕಮ್ ॥೬೨॥**

ಯಾವಾಗ ಶ್ರೀ ವಾಸುದೇವನು ಈ ದೇಹಿಯ ನೇತ್ರಮಂಡಲದ ದೆಸೆಯಿಂದ ಹೊರಟುಹೋಗುವನೋ ಆಗ ಈತನು ಸೂರ್ಯ ಅಥವಾ ಚಂದ್ರಮಂಡಲವನ್ನು ಕಿರಣವಿಲ್ಲದಿರುವಂತೆ ನೋಡುವನು.

**ನರಃ ಪ್ರಾಯಃ ಸಪ್ತರಾತ್ರಾದಧಿಕಂ ನಹಿ ಜೀವತಿ।**
**ಚಕ್ಷುರಂತಸ್ಥಿತೋ ಯಸ್ಮಾದ್ವಾಮನಃ ಸಂಗವೋಜ್ಝಿತಃ ॥೬೩॥**

ಮೇಲೆ ಹೇಳಿದಂತೆ ಸೂರ್ಯ ಅಥವಾ ಚಂದ್ರಮಂಡಲವನ್ನು ಕಿರಣಗಳಿಲ್ಲದ ಹಾಗೆ ನೋಡುವವನು ಆ ದಿನದಿಂದ ಏಳು ದಿನಗಳಮೇಲೆ ಬದುಕುವುದಿಲ್ಲ; ನೇತ್ರದೊಳಗಿರುವ ಶ್ರೀ ವಾಮನನು ಸಂಗರಹಿತನು.

**ವಸ್ತ್ವಸಂಗಮಭೂಚ್ಚಕ್ಷುಸ್ತಸ್ಮಾದ್ವೇದ್ಯಃ ಸ ವಾಮನಃ।**
**ನಾಸಾಭಿಮಾನಿನೌ ಜ್ಞೇಯಾವಶ್ವಿನೌ ಸ್ವರ್ಭಿಷಗ್ವರೌ ॥೬೪॥**

ನೇತ್ರಗಳಿಂದ ನೋಡಿದರೂ ಯಾವುದೊಂದು ಪದಾರ್ಥದ ಅಥವಾ ಮನುಷ್ಯರ ಸ್ತ್ರೀಯರ ರೂಪುಗ್ರಹಣಮಾಡಿದರೂ ತನ್ನಲ್ಲಿಯೇ ಯಾವಾಗಲೂ ಇಟ್ಟುಕೊಳ್ಳದಿರುವದೇ ಅಸಂಗವು; ಆದುದರಿಂದಲೇ ಅಲ್ಲಿರುವ ವಾಮನನು ಸಂಗರಹಿತನೆಂದೂ ಹಾಗೆ ಸಂಗವಿಲ್ಲದಿರುವದರಿಂದಲೇ ವಾಮನನೆಂದೂ ಹೇಳುವರು. ಮೂಗಿಗೆ ದೇವತೆಗಳ ವೈದ್ಯಶ್ರೇಷ್ಠರಾದ ನಾಸತ್ಯದಸ್ರರೆಂಬ ಅಶ್ವಿನೀದೇವತೆಗಳು ಅಭಿಮಾನಿಗಳು.

ತಯೋರ್ಧನ್ವಂತರಿ ಶ್ಚಿಂತ್ಯಃ ಸರ್ವವ್ಯಾಧಿ ನಿವಾರಕಃ ।
ಋತಂಭರಶ್ಚ ಋಘುಶ್ಚ ನಾಸಿಕಾಪುಟಯೋಃ ಸ್ಥಿತಃ ||೬೫||

ಈ ಅಶ್ವಿನೀ ದೇವತೆಗಳಲ್ಲಿ ಸಕಲ ರೋಗಪರಿಹಾರಕನಾದ ಧನ್ವಂತರಿ ನಾಮಕ ಹರಿಯನ್ನು ತಿಳಿಯುವುದು; ಮೂಗಿನ ರಂಧ್ರಗಳಲ್ಲಿ ಋತಂಭರ ಮತ್ತು ಋಘುರೆಂಬ ಎರಡು ಭಗವದ್ರೂಪಗಳಿರುವುವು.

ನಾಸಿಕಾಯಾಂ ನತಸ್ಥಾನೇ ಸೂರ್ಯಲೋಕಃ ಪ್ರತಿಷ್ಠಿತಃ ।
ತತ್ರತ್ಯಾದಿತ್ಯ ಗೋವಿಷ್ಣು ರಿರಾಮಯ ಇತೀರಿತಃ ||೬೬||

ಮೂಗಿನ ಮೇಲೆ ಹುಬ್ಬುಗಳ ನಡುವೆ ಹಳ್ಳವಾಗಿರುವ ಜಾಗದಲ್ಲಿ ಸೂರ್ಯಲೋಕವಿರುವುದು; ಅಲ್ಲಿರುವ ಆದಿತ್ಯನಲ್ಲಿ ವಿಷ್ಣುವು ಇರಾಮಯ ನೆಂಬ ನಾಮದಿಂದಿರುವನು.

ಇಚ್ಛಾನುರೂಪಂ ಹಿ ಸುಖಂ ಈರೇತಿ ಪರಿಕೀರ್ತಿತಮ್ ।
ಇಚ್ಛಾನಂದ ಸ್ವರೂಪತ್ವಾತ್ಸ ಏವೋಕ್ತೋ ಹಿರಣ್ಮಯಃ ||೬೭||

ತನ್ನ ಅಪೇಕ್ಷೆಗೆ (desire) ಅನುಗುಣವಾದ ಸುಖವು "ಈರ" ಎಂದು ಹೇಳಲ್ಪಡುವುದು; ಇಚ್ಛೆ ಮತ್ತು ತದನುಸಾರಿಯಾದ ಆನಂದವೇ ಸ್ವರೂಪಭಾವವುಳ್ಳವನಾದುದರ ದೆಸೆಯಿಂದಲೇ ಆತನು ಹಿರಣ್ಮಯನೆಂದು ಹೇಳಲ್ಪಡುವನು.

ಹಿರುಕ್ಸುಖಂ ಹಿರಣ್ಯಂ ಸ್ಯಾ ದಿತಿಸ್ವರ್ಣಮಯೋ ಹರಿಃ ।
ಉಚ್ಛ್ವಾಸೇ ಭಾರತೀಜ್ಞೇಯಾ ಶ್ವಾಸೇ ಪ್ರಾಣಂ ವಿಚಿಂತಯೇತ್ ||೬೮||

ನಿರ್ದೋಷವಾದ ಸುಖವು ಹಿರಣ್ಯವೆಂದು ಹೇಳಲ್ಪಡುವುದು; ಆದುದ ರಿಂದಲೇ ಸ್ವರ್ಣಮಯನು ಶ್ರೀಹರಿಯು; ಹೊರಗೆ ಬರುವ ಘಾಳಿಯಲ್ಲಿ ಪ್ರಾಣನನ್ನು ಧ್ಯಾನಮಾಡುವುದು.

**ಪ್ರಾಣಶ್ಚ ಹಂಸನಾಮಾಸೌ ಉಪಾಸ್ತೆ ಹಂಸನಾಮಕಮ್ ।**
**ಸೂರ್ಯಶ್ಚ ದಕ್ಷಿಣಶ್ವಾಸೆ ವಾಮೆ ಸೋಮ ಉದಾಹೃತಃ ॥೬೯॥**

ಈ ಪ್ರಾಣನನ್ನು ಹಂಸನೆಂದು ಹೇಳುವರು; ಈತನು ಹಂಸನೆಂಬ ಹರಿಯನ್ನು ಉಪಾಸನೆ ಮಾಡುವನು; ಮೂಗಿನ ಬಲರಂಧ್ರದಿಂದ ಹೋಗುವ ವಾಯುವಿನಲ್ಲಿ ಸೂರ್ಯನೂ, ಎಡರಂಧ್ರದಲ್ಲಿ ಚಂದ್ರನೂ ಇರುವರು.

**ಶ್ವಾಸಶ್ಚ ಹಂಸದೈವತ್ಯೋ ಹಂಸಃ ಪ್ರಾಣೇಸ್ಥಿತೋ ಹರಿಃ ।**
**ಸರ್ವದೋಷ ವಿಹೀನತ್ವಾ ತ್ಸರ್ವಸಾರತ್ವತೋ ಪಿಚ ॥೭೦॥**

**ಹಂಸ ಇತ್ಯುಚ್ಯತೆ ಸೋಽಪಿ ಪ್ರಾಣಸ್ಥಃ ಶುಚಿಷತ್ಸ್ಮೃತಃ ।**
**ತಸ್ಮಾದೇತ ತ್ಪೂರಕಾದ್ಯೈಃ ಪ್ರಾಣಾಯಾಮೋಽಘಶೋಷಣಃ ॥೭೧॥**

ಈ ಶ್ವಾಸವು ಶ್ರೀ ಹಂಸ ದೇವತಾಕವಾದುದು; ಈ ಹಂಸರೂಪೀ ನಾರಾಯಣನು ಮುಖ್ಯಪ್ರಾಣನಲ್ಲಿರುವನು; ಸಕಲ ದೋಷರಹಿತನಾದುದ ರಿಂದಲೂ ಸರ್ವಸಾರ ಸ್ವಭಾವವುಳ್ಳವನಾದುದರಿಂದಲೂ ಹಂಸನೆಂದು ಆತನ ಪ್ರಸಿದ್ಧಿಯು. ಆತನು ಪ್ರಾಣ(ವಾಯು)ನಲ್ಲಿರುವಾಗ "ಶುಚಿಷತ್" ಎಂದು ಹೇಳಲ್ಪಡುವನು; ಆದುದರಿಂದ, ಪೂರಕ, ರೇಚಕ ಮತ್ತು ಕುಂಭಕರೂಪ ವಾದ ಪ್ರಾಣಾಯಾಮವು ಮಾಡಿದರೆ ಸಕಲ ಪಾಪಗಳೂ ಒಣಗಿಹೋಗುವುವು.

ಪೂರಕವೆಂದರೆ ಎಡಗಡೆಯ ಮೂಗಿನ ರಂಧ್ರದಿಂದ ಗಾಳಿಯನ್ನು ಒಳಗೆ ತೆಗೆದುಕೊಳ್ಳುವುದು; ರೇಚಕವೆಂದರೆ ಗಾಳಿಯನ್ನು ಮೂಗಿನ ಬಲ ರಂಧ್ರದಿಂದ ಹೊರಗೆ ಬಿಡುವುದು; ಮತ್ತು ಕುಂಭಕವೆಂದರೆ ಒಳಗೆ ತೆಗೆದು ಕೊಂಡ ಗಾಳಿಯನ್ನು ಕೆಲವು ಹೊತ್ತು ಹೃದಯದಲ್ಲಿ ತಡೆದು ನಿಲ್ಲಿಸಿರುವುದು.

**ಲೃಶಲೃಜೀಚ ವಿಜ್ಞೇಯೌ ಗಂಡಯೋಃ ರೋಷ್ಮಯೋಃ ಸ್ಥಿತೌ ।**
**ಏಕಾತ್ಮೈರೌದಂತಪಙ್ಕ್ತಿ ಸ್ಥಿತಾವೋಷ್ಠೋಭೃತೌರಸೌ ॥೭೨॥**

ಲೃಶ ಮತ್ತು ಲೃಜಿ ಎಂಬ ಎರಡು ಭಗವದ್ರೂಪಗಳು ಬಲ ಮತ್ತು ಎಡ ಕಪೋಲಗಳಲ್ಲಿಯೂ, ಏಕಾತ್ಮ ಮತ್ತು ಐರರೆಂಬ ಎರಡು ರೂಪಗಳು ಎರಡು ತುಟಿಗಳಲ್ಲಿಯೂ, ಎರಡು ಹಲ್ಲುಗಳ ಸಾಲಿನಲ್ಲಿಯೂ ಓಜೋಭೃತ ಮತ್ತು ಔರಸ ಎಂಬ ಎರಡು ಭಗವದ್ರೂಪಗಳೂ ಇರುವುವು.

ಜಿಹ್ವಾಭಿಮಾನೀ ವರುಣೋ ಮತ್ಸ್ಯಸ್ತಸ್ಯ ನಿಯಾಮಕಃ ।
ವಾಗಿಂದ್ರಿಯ ಸ್ಥಿತೋವಹ್ನಿ ಸ್ತಸ್ಮಿನ್ವೇದ್ಯೋ ವಿಷಾಸಹಿಃ ||೭೩||

ರುಚಿಗ್ರಹಣಮಾಡುವ ನಾಲಿಗೆಗೆ ವರುಣನು ಅಭಿಮಾನಿಯು ; ಆತನಲ್ಲಿ ಮತ್ಸ್ಯರೂಪೀ ಹರಿಯು ನಿಯಾಮಕನು ; ಮಾತನಾಡುವ ಶಕ್ತಿಯುಳ್ಳ ವಾಗಿಂದ್ರಿಯದಲ್ಲಿ ಅಗ್ನಿಯು ಅಭಿಮಾನಿಯು ; ತನ್ನಿಯಾಮಕನು ವಿಷಾಸಹಿ ಎಂಬ ಪರಶುರಾಮರೂಪೀ ಹರಿಯು.

ತಥಾ ನಾರಾಯಣೀರೂಪಂ ರಾತ್ರಿಸೂಕ್ತಾಧಿದೈವತಾಮ್ ।
ವಾಚ್ಯರ್ಥಗರ್ಭೋ ವಿಜ್ಞೇಯೋ ವಾಗ್ಗತಾಹಿ ಸರಸ್ವತೀ ||೭೪||

ಹಾಗೆಯೇ ರಾತ್ರಿಸೂಕ್ತದ ಅಧಿದೈವತೆಯಾದ ನಾರಾಯಣೀ ಎಂಬ ಶ್ರೀ ಹರಿಯ ಸ್ತ್ರೀರೂಪವನ್ನು "ವಾಚಿ" ಯಲ್ಲಿ, ವಾಕ್ಕಿನಲ್ಲಿ ಸರಸ್ವತೀ ದೇವಿಯನ್ನೂ ಅಲ್ಲಿ ನಿಯಾಮಕನಾದ ಅರ್ಥಗರ್ಭನಾಮಕನಾದ ಶ್ರೀಹರಿಯನ್ನೂ ತಿಳಿಯುವುದು.

ತತ್ರ ವಾಗೀಶ್ವರಃ ಸರ್ವಪಾಲನಾದಪಿ ಸರ್ವತಃ ।
ವಿಶಿಷ್ಟತ್ವಾದ್ವಿಷ್ಣವಿಃ ಪ್ರೋಕ್ತಃ ಪ್ರಲೀನಾಖಿಲ ಕುತ್ಸಿತಃ ||೭೫||

ಕುಲೀತ್ಯುಕ್ತೋ ಹರಿಃ ಸಾಕ್ಷಾತ್ಸ್ತ್ರೀರೂಪೋ ಹಯಶೀರ್ಷಕಃ ।
ಯೋ ಹಯಾಸ್ಯ ಮುಪಾಸೀತ ತಸ್ಯ ವಿದ್ಯಾ ಫಲಿಷ್ಯತಿ ||೭೬||

ಅಲ್ಲಿ ವಾಕ್ಕಿಗೆಲ್ಲ ಪ್ರಭುವಾಗಿ ಸಕಲ ಕಡೆಗಳಿಂದಲೂ ಸರ್ವರನ್ನೂ ಪಾಲನೆ ಮಾಡೋಣದರಿಂದಲೂ, ಸರ್ವೋತ್ತಮನಾದುದರಿಂದಲೂ "ಪವಿಃ" ಎಂದು ಹೇಳಲ್ಪಡುವವನು; ಸಕಲ ನೀಚ ವ್ಯಾಪಾರದ ದೆಸೆಯಿಂದ ರಹಿತ ನಾಗಿರೋಣದ್ದರಿಂದ "ಕುಲೀ" ಎಂದು ಆತನ ನಾಮವು; ಇದು ಸಾತ್ತ್ವಿಕತ್ಮಕವಾದ ಹಯಗ್ರೀವ ರೂಪವು; ಈ ಹಯಮುಖನನ್ನು ಉಪಾಸನೆ ಮಾಡುವವರಿಗೆ ಸಕಲ ಮಂತ್ರಸಿದ್ಧಿಯೂ ಮತ್ತು ಸಕಲ ವಿದ್ಯೆಯ ಪ್ರಾಪ್ತಿಯೂ ಆಗುವುದು.

[ಇದು ಗಾಯತ್ರೀ ಪ್ರತಿಪಾದ್ಯರೂಪವು; ಗಾಯತ್ರಿಯು ವೇದ ಮಾತೆಯು; ಆದುದರಿಂದ ಗಾಯತ್ರೀ ಸಿದ್ಧಿಯುಳ್ಳವರಿಗೆ ಇತರ ಸಕಲ ಮಂತ್ರಗಳ ಸಿದ್ಧಿಯಾಗುವುದು ಎಂದು ನಿಶ್ಚಯವು.]

**ಪಾಣಿದ್ವಯಾಭಿಮಾನೀ ಚ ಜ್ಞೇಯೋ ದಕ್ಷಃ ಪ್ರಜಾಪತಿಃ ।**
**ಮಧುಘ್ನೋ ದಕ್ಷಿಣೆಹಸ್ತೆ ಕಪಿಲಾದ್ಯಾಶ್ಚ ಸಂಧಿಷು ॥೭೭॥**

ಎರಡು ಕೈಗಳಿಗೂ ದಕ್ಷಪ್ರಜಾಪತಿಯು ಅಭಿಮಾನಿಯು; ಬಲದ ಹಸ್ತದಲ್ಲಿ ಮಧುಸೂದನನೂ ಸಂಧಿಗಳಲ್ಲಿ ಕಪಿಲ, ಖಪತಿ, ಗರುಡಾಸನ, ಘರ್ಮ ಮತ್ತು ಜಸಾರ ಎಂಬ ಐದು ಮೂರ್ತಿಗಳಿರುವರು.

**ಮೂರ್ತಯಃ ಪಂಚವಿಜ್ಞೇಯಾ ಮಾತೃಕಾವರ್ಣದೇವತಾಃ ।**
**ದಕ್ಷಿಣಾಂಗುಷ್ಠಮೂಲೇತು ತೀರ್ಥಂ ಬ್ರಾಹ್ಮಮುದಾಹೃತಮ್॥೭೮॥**

ಹಿಂದೆ ಹೇಳಿದ ಐಮೂರ್ತಿಗಳು ಮಾತೃಕಾವರ್ಣನಿಯಾಮಕ ಮತ್ತು ಪ್ರತಿಪಾದ್ಯ ಮೂರ್ತಿಗಳು; (ಕ ವರ್ಗದ ಐದು ಅಕ್ಷರಗಳು) ಬಲಗೈನ ಹೆಬ್ಬೆಟ್ಟಿನ ಮೂಲಭಾಗವು ಬ್ರಾಹ್ಮ (ಬ್ರಹ್ಮ ಸಂಬಂಧಿ) ತೀರ್ಥವೆಂದು ನಿಶ್ಚಯವು.

ಕನಿಷ್ಠಾಮೂಲಗಂ ಯತ್ತತ್ಪ್ರಾಜಾಪತ್ಯಂ ತದಾರ್ಷಕಮ್ ।
ತರ್ಜನೀ ಮೂಲದೇಶೇತು ಪೈತೃಕಂ ತೀರ್ಥಮುತ್ತಮಮ್ ॥೭೯॥

ಕಿರುಬೆರಳಿನ ಮೂಲದಲ್ಲಿ ಪ್ರಾಜಾಪತ್ಯವೆಂಬ ಋಷಿತೀರ್ಥವಿರುವುದು ; ತರ್ಜನಿಯ (ಹೆಬ್ಬೆರಳಿನಿಂದ ಎರಡನೆಯದು) ಬೆರಳಿನ ಬುಡದಲ್ಲಿ ಪಿತೃತೀರ್ಥ ವಿರುವುದು.

ಅಂಗುಲ್ಯಗ್ರೇ ದೇವತೀರ್ಥಮಾಗ್ನೇಯಂ ಕರಮಧ್ಯಗಮ್ ।
ಜ್ಞಾತ್ವೈವಂ ಪಂಚತೀರ್ಥಾನಿ ತದ್ದ್ವಾರಾ ಕೃತಮಕ್ಷಯಮ್ ॥೮೦॥

ಬೆರಳುಗಳ ತುದಿಯಲ್ಲಿ ದೇವತೀರ್ಥವು ಅಂಗೈಮಧ್ಯದಲ್ಲಿ ಅಗ್ನಿ ತೀರ್ಥವು ಇರುವುವು ; ಹೀಗೆ ಐದು ತೀರ್ಥಗಳನ್ನು ತಿಳಿದು ಮಾಡಿದ ಸಕಲ ಸತ್ಕರ್ಮವೂ ನಾಶರಹಿತವಾದ ಫಲಕ್ಕೆ ಕಾರಣವಾಗುವುದು.

ಶ್ರೀಧರೋ ವಾಮಹಸ್ತಸ್ಥ ಶ್ಶಾರ್ಙ್ಗಾದ್ಯಾಶ್ಚ ಸಂಧಿಗಾಃ ।
ನೇದ್ಯಸ್ತುಂದೇ ಮನುರ್ದೇವಃ ಪರೋ ದಕ್ಷಿಣಪಾರ್ಶ್ವಕೇ ॥೮೧॥

ಶ್ರೀಧರನು ಎಡದ ಹಸ್ತದ ಅಭಿಮಾನಿಕನು ; ಶಾರ್ಙ್ಗ ಛಂದೋಗಮ್ಯ, ಜನಾರ್ದನ, ಝಾಟಿತಾರಿ ಮತ್ತು ಇಾಮ ಈ ಐದು ಭಗವದ್ರೂಪಗಳೂ ಎಡಗಡೆಯ ಬಾಹುಸಂಧಿಗಳಲ್ಲಿರುವವರು ; ತುಂದಿಯಲ್ಲಿ ವೃಷಣಕ್ಕೂ ಆಸನಕ್ಕೂ ಮಧ್ಯದಲ್ಲಿರುವ ಗಡ್ಡೆ ಮನುವೂ, ಮತ್ತು ದೇಹದ ಬಲಪಕ್ಕೆಯಲ್ಲಿ ಪರನೂ ಇರುವರು.

ವಾಮೇ ಜ್ಞೇಯಃ ಫಲೀ ಯಜ್ಞೋ ಹೃದಿ ಪೃಷ್ಠೇಸ್ಥಿತೋ ಬಲೀ ।
ಕಟದೇಶೇಽನಿರುದ್ಧಶ್ಚ ಗುಹ್ಯೇ ಸ್ವಾಯಂಭುವೋ ಮನುಃ ॥೮೨॥

ಎಡಪಕ್ಕೆಯಲ್ಲಿ ಫಲಿಯೂ, ಯಜ್ಞನು ಹೃದಯದಲ್ಲಿಯೂ, ಹಿಂಭಾಗದಲ್ಲಿ (ಬೆನ್ನು) ಬಲಿಯೂ, ಪಿರ್ರೆಗಳಲ್ಲಿ ಅನಿರುದ್ಧನೂ ಇರುವರು ; ಗುಹ್ಯೇಂದ್ರಿಯದಲ್ಲಿ ಸ್ವಾಯಂಭುವ ಮನುವು ಅಭಿಮಾನಿಯು.

ತಸ್ಮಿನ್ ಭಗೋ ಹರಿ ಶ್ಚಿಂತ್ಯಃ ಪ್ರಜಾಪತಿ ರಿತೀರಿತಃ।
ರೇತೋಽಭಿಮಾನೀ ಚಾದಿತ್ಯ ಸ್ತಸ್ಮಾನ್ನಾ ದಿತ್ಯ ನಾಮಕಃ ||೬೩||

ಅಲ್ಲಿ ಭಗನೆಂಬ ಹರಿಯನ್ನು ತಿಳಿಯುವುದು; ಅವನನ್ನು "ಪ್ರಜಾಪತಿ" ಎಂದು ಹೇಳುವರು; ರೇತಸ್ಸಿಗೆ ಅಭಿಮಾನಿಯು ಆದಿತ್ಯನು (ಸೂರ್ಯನು); ಆತನಲ್ಲಿ ಆದಿತ್ಯನೆಂಬ ಹರಿ ಇರುವನು.

ಪುಂರೂಪೇ ಭಗವಾನ್ವಿಷ್ಣೂ ರೇತಸ್ಯಪಿ ಪುಮಾತ್ಮಕಃ।
ತಸ್ಮಾಚ್ಛುಕ್ಲಾನ್ನಬೀಭತ್ಸೇ ತ್ಭಾರ್ಯಾ ಭರ್ತೃಗತಾದ್ಯಶಮ್ ||೬೪||

ಪುರುಷನಲ್ಲಿಯೂ ಆತನ ರೇತಸ್ಸಿನಲ್ಲಿಯೂ ಹರಿಯು ಪುರುಷರೂಪ ದಿಂದಲೇ ಇರುವನು; ಆದುದರಿಂದ ಆ, ಗಂಡನಾದ ಪುರುಷನಲ್ಲಿರುವ, ರೇತಸ್ಸನ್ನು ಪತ್ನಿಯು ನಿರಾಕರಿಸಬಾರದು ಮತ್ತು ಅಸಹ್ಯಪಡಬಾರದು.

ಏವಂ ಸ್ತ್ರೀಲೋಹಿತೇ ಪ್ಯಗ್ನಿ ಸ್ತದ್ಗತೋಪ್ಯ ಗ್ನಿನಾಮಕಃ।
ಸ್ತ್ರೀರೂಪೀ ಸಂಸ್ಥಿತಂ ತಸ್ಮಾನ್ನ ಬೀಭತ್ಸೇತ ಲೋಹಿತಮ್ ||೬೫||

ಹೀಗೆಯೇ ಹೆಂಗಸಿನ ಯೋನಿದ್ವಾರದಿಂದ ಬರುವ ರಕ್ತದಲ್ಲಿ ಅಗ್ನಿಯು ಅಭಿಮಾನಿಯು; ಅಲ್ಲಿ ಹೆಂಗಸಿನ ರೂಪದಿಂದಲೇ ಅಗ್ನಿ ಎಂಬ ಶ್ರೀಹರಿಯು ಇರುವನು; ಆದುದರಿಂದ ಅದನ್ನು ತಿರಸ್ಕರಿಸಬಾರದು.

ಪುಂಸ್ತ್ರೀ ರೂಪಾಭಿಯೋಗೇನ ಪಿತೃಸ್ಥಃ ಪುತ್ರತಾಮಿಯಾತ್।
ಅಂಶಾಂಶಿತ್ವೇಚ್ಛಯಾ ವಿಷ್ಣು ರ್ನಚೇದಿಚ್ಛಾ ನ ಸಂತತಿಃ ||೬೬||

ಪುರುಷ ಮತ್ತು ಸ್ತ್ರೀಸಂಗಮದಿಂದ ಪುರುಷನಲ್ಲಿರುವ (ತಂದೆ) ವಿಷ್ಣುವು ಅಂಶಾಂಶಿಯಾಗಬೇಕೆಂಬ ಆಶೆಯಿಂದ ಪುತ್ರಭಾವವನ್ನು ಹೊಂದುವನು; ಹಾಗೆ ಶ್ರೀಹರಿಯು ಇಚ್ಛೆಯೇ ಇಲ್ಲದಿದ್ದರೆ ಮಕ್ಕಳಾಗುವುದಿಲ್ಲ.

ಶುಕ್ಲಾಧಿಕೇ ಪುಮಾನೇವ ಕನ್ಯಾಸ್ಯಾಚ್ಛೋಣಿತೇಧಿಕೆ ।
ತಯೋಃ ಸಮೇತು ಷಂಢಃ ಸ್ಯಾದೇ ತನ್ನ್ಯೂನಾಧಿಕಾಧಿಕಮ್ ॥೮೭॥

ಶುಕ್ಲವು ಹೆಚ್ಚಾಗಿದ್ದರೆ ಗಂಡೂ, ಶೋಣಿತವು ಅಧಿಕವಾದರೆ ಹೆಣ್ಣೂ, ಎರಡೂ ಸಮವಾದರೆ ನಪುಂಸಕನೂ ಹುಟ್ಟುವರು; ಇದೇ ನಿರ್ಣಯವು.

ಆದಿತ್ಯಾಗ್ನಿ ನಿಯೋಗೇನ ಭವೇತ್ಕರ್ಮ ಸ್ವಭಾವತಃ ।
ಆನಂದಾಖ್ಯೋ ರಮೇತ್ ಸ್ತ್ರೀ ಪುಂಸ್ಥಿತಃ ಪುರುಷೋತ್ತಮಃ ॥೮೮॥

ಕರ್ಮಗಳ ಸ್ವಭಾವದ ದೆಸೆಯಿಂದ ಆದಿತ್ಯ ಮತ್ತು ಅಗ್ನಿಯ ಪರಸ್ಪರ ಸಂಬಂಧದಿಂದ ಆನಂದನೆಂಬ ಪುರುಷ ಮತ್ತು ಸ್ತ್ರೀಯರಲ್ಲಿರುವ ಶ್ರೀನಾರಾಯಣನು (ಪುರುಷೋತ್ತಮನು) ಇಬ್ಬರಿಗೂ ತನ್ನ ವಿಹಾರದಿಂದ ಆನಂದವನ್ನುಂಟುಮಾಡುವನು.

ದಂಪತ್ಯೋಃ ಪ್ರೀತಿಮುತ್ಪಾದ್ಯ ಸ್ವೇಚ್ಛಯೈವ ನ ಚಾನ್ಯಥಾ ।
ತಯೋಶ್ಚ ಮಿಥುನೀಭಾವಂ ಯಥೋ ನಯತಿ ಯದ್ಧರಿಃ ॥೮೯॥

ಗಂಡ ಹೆಂಡರಿಬ್ಬರಿಗೂ ಪರಸ್ಪರ ಪ್ರೀತಿಯನ್ನು ಹುಟ್ಟಿಸಿ ತನ್ನ ಇಚ್ಛೆಯಿಂದಲೇ ಅವರಿಬ್ಬರಿಗೂ ಒಂದೇ ಜಾಗದಲ್ಲಿದ್ದು ವಿಹರಿಸುವ ಭಾವವನ್ನು ಹೇಗೆ ಮಾಡುವನೋ ಅದನ್ನು ಹೇಳುವರು.

ತತಸ್ಸಮಿಥುನೋನಾಮ ಪಂಚಧಾತ್ರ ವ್ಯವಸ್ಥಿತಃ ।
ಕರೋತಿ ಋತುಸಂಕೇತಂ ತಸ್ಯಾಂ ಹಿಂಕಾರ ನಾಮಕಃ ॥೯೦॥

ಸುಖಂ ಚಾನುಭವತ್ಯೇಷಃ ತಸ್ಮಿನ್ ಪ್ರಸ್ತಾವನಾಮಕಃ ।
ಸಃಸ್ತ್ರೀಗತಯಾ ಶೇತೆ ರಮಯೇ ದುದ್ಗೀಥ ನಾಮಕಃ ॥೯೧॥

ಪ್ರತಿಃ ಸ್ತ್ರೀಸಹಿತಃ ಶೇತೆ ಪ್ರತಿಹಾರಾಭಿಧೋ ಹರಿಃ ।
ಕಾಲೋ ಗಚ್ಛತಿ ಯಃ ಪಾರಂ ತಸ್ಮಿನ್ಸಃ ನಿಧನಾಭಿಧಃ ॥೯೨॥

ಆ ಮಿಥುನೀಭಾವವು ಐದು ವಿಭಾಗವಾಗಿರುವುವು; ಋತುಕಾಲ ವುಂಟಾಗುವುದು; ಆಗ ಸ್ತ್ರೀಯರಲ್ಲಿ ಹಿಂಕಾರನಾಮಕನಾದ ಹರಿ ಇರುವನು; ಪುರುಷನು ಸುಖಾನುಭವ ಮಾಡುವನು; ಆಗ ಅಲ್ಲಿ ಪ್ರಸ್ತಾವನು; ದಂಪತಿಗಳು ಒಂದೇ ಹಾಸಿಗೆಯಲ್ಲಿದ್ದು ವಿಹರಿಸುವರು; ಆಗ ಉದ್ಗೀಥ ನಾಮಕನು; ಆ ಸ್ತ್ರೀಯೊಡನೆ ಹಾಗೆಯೇ ಬಹುಕಾಲ ಇರುವಾಗ ಅಲ್ಲಿ ಪ್ರತಿಹಾರನು; ರೇತಸ್ಸಿನ ಸ್ಖಲನಾನಂತರ ನಿಧನನಾಮಕನು. ಹೀಗೆ ಐದು ಸಾಮಗಳು. ಹೀಗೆ ಈ ಐದು ಕಾಲಗಳಲ್ಲಿಯೂ ಪುರುಷರಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಾಂತರ್ಗತ ಶ್ರೀ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ನಾರಾಯಣನೆಂಬ ಪಂಚ ಪುರುಷರೂಪದಿಂದಲೂ ಹಾಗೆಯೇ ಸ್ತ್ರೀಯರಲ್ಲಿ ಭಾರತೀ ಮತ್ತು ಲಕ್ಷ್ಮೀ ದೇವಿಯ ಅಂತರ್ಗತ ಐದು ಸ್ತ್ರೀರೂಪದಿಂದಲೂ ಇರುವನು. ಆ ಸ್ತ್ರೀಪುರುಷ ರಿಂದ ಅನುಭವಿಸಲ್ಪಡುವ ಸುಖಾನುಭವವನ್ನು ತಾನೇ ಪೂರ್ಣವಾಗಿ ಹೊಂದಿ ಇತರರಿಗೆ ಅವರವರ ಯೋಗ್ಯತಾನುಸಾರವಾಗಿ ಉಂಟುಮಾಡುತ್ತಾನೆ.

**ಜ್ಞಾತ್ವೈವಂ ಪಂಚರೂಪಾಣಿ ಮಿಥುನಸ್ಥಾನಿ ವೈ ಹರೇಃ ।**
**ಸ್ವಸ್ತ್ರೀ ಸಂಸರ್ಗತೋ ಯಾತಿ ವಾಮದೇವಾಧ್ವರಂ ಫಲಮ್ ॥೯೩॥**

ಹೀಗೆ ಮೈಥುನ ಕಾಲದಲ್ಲಿ ಶ್ರೀಹರಿಯ ಈ ರೂಪಗಳನ್ನು ತಿಳಿದು ತನ್ನ ನಿಜಭಾರ್ಯೆಯ ಸಮಾಗಮವನ್ನು ಮಾಡಿದರೆ ವಾಮದೇವ ಎಂಬ ಯಜ್ಞಮಾಡಿದ ಫಲ ಬರುವುದು.

**ತಸ್ಮಾದನೇಕಪತ್ನೀಕಃ ಪತ್ನೀಷ್ವೇಕಾಂ ನ ಚ ತ್ಯಜೇತ್ ।**
**ಪತೀನಾಂ ತದ್ವ್ರತಂ ನೋ ಚೇದ್ಭ್ರೂಣಹತ್ಯಾಂ ಚ ವಿಂದತಿ ॥೯೪॥**

ಆದುದರಿಂದ ಅನೇಕ ಪತ್ನಿಯರುಳ್ಳ ಒಬ್ಬ ಪುರುಷನು ಋತುಕಾಲದಲ್ಲಿ ಒಬ್ಬಳನ್ನಾದರೂ ನಿರಾಕರಿಸಬಾರದು; ಪತಿಯ ನಿಯಮವು ಒಂದು ವೇಳೆ ತಪ್ಪಿದರೆ ಶಿಶುಹತ್ಯ ಪಾಪ ಬರುವುದು.

**ವಾಸುದೇವಾ ಭಿಧೋ ವಿಷ್ಣುಃ ಯೋನೇಃ ಪ್ರಸವಶಕ್ತಿದಃ।**
**ತಸ್ಯಾಂ ಗರ್ಭವಿಘಾತಾದಿ ದೋಷಾ ಸಂಶೋಧಯಿಷ್ಯತಿ ॥೯೫॥**

ಶ್ರೀ ವಾಸುದೇವನೆಂಬ ವಿಷ್ಣುವು ಯೋನಿಗೆ ಪ್ರಸವ (ಹಡೆಯುವ) ಶಕ್ತಿಯನ್ನೂ ಮತ್ತು ಅವಕಾಶವನ್ನೂ ಕೊಡುವನು; ಆಕೆಯಲ್ಲಿ ಗರ್ಭಕ್ಕೆ ವಿಘ್ನವುಂಟುಮಾಡುವ ದೋಷಗಳನ್ನು ಕಳೆಯುವನು.

**ಸಂಕರ್ಷಣಾ ಭಿಧ ಸ್ತ್ವಷ್ಟಾ ಗರ್ಭರೂಪ ವಿಧಾಯಕಃ।**
**ರೇತಃ ಸೇಚಯತಿ ತಸ್ಯಾಂ ಪ್ರದ್ಯುಮ್ನಾಖ್ಯಃ ಪ್ರಜಾಪತಿಃ ॥೯೬॥**

ಗರ್ಭಗತರೂಪದ ವಿಧಾನಮಾಡುವವನು ಸಂಕರ್ಷಣನೆಂಬ ಬಡಗಿಯ ರೂಪಿಯಾದ ಶ್ರೀಹರಿಯು; ಪ್ರದ್ಯುಮ್ನನೆಂಬ ಪ್ರಜಾಪತಿಯು ಆ ಯೋನಿಯಲ್ಲಿ ಪುರುಷನ ರೇತಸ್ಸನ್ನು ಹಾಕುವನು.

**ಅನಿರುದ್ಧಾ ಭಿಧೋ ಧಾತಾ ಗರ್ಭಾಧಾರ ಸ್ತದಾಜನಿಃ।**
**ಶ್ವಾಸೋಚ್ಛ್ವಾಸ ನಿರುದ್ಧೋತ್ಥ ಕ್ಲೇಶನಾಶೋ ಭವತ್ಯತಃ ॥೯೭॥**

ಅನಿರುದ್ಧನೆಂಬ ಧಾತೃವು ಗರ್ಭಾಧಾರಕನು; ನಂತರ ಜನನವು; ಶ್ವಾಸೋಚ್ಛ್ವಾಸ ನಿರೋಧದಿಂದ ಆಗುವ ದುಃಖವನ್ನೂ ಅನಿರುದ್ಧನೆಂಬ ಶ್ರೀಹರಿಯು ಪರಿಹರಿಸುವನು.

**ಅನಿರುದ್ಧ ಇತಿ ಪ್ರೋಕ್ತಃ ಸ ಗರ್ಭಂ ಧಾರಯಿಷ್ಯತಿ।**
**ಸಂಗಕಾಲೇ ದ್ಯು ಪರ್ಜನ್ಯ ಧರಾ ಪುಂಸ್ತ್ರೀ ಸ್ಥಿತಾನಿ ಚ ॥೯೮॥**

**ನಾರಾಯಣಾದಿ ರೂಪಾಣಿ ಧ್ಯಾಯೇತ್ ಸ್ವಸ್ತ್ರಿಯ ಮುಶ್ನತೆ।**
**ತಸ್ಯ ಸ್ತ್ರೀ ಸಂಗದೋಷೋಪಿ ಲಿಪ್ಯತೆ ನ ಕದಾಚನ ॥೯೯॥**

ಗರ್ಭವನ್ನು ಧಾರಣೆಮಾಡುವದರಿಂದ ಅನಿರುದ್ಧನೆಂಬ ನಾಮವು; ಸ್ತ್ರೀರಮಣಕಾಲದಲ್ಲಿ ಆಕಾಶ, ಪರ್ಜನ್ಯ (ಮೇಘ ಮತ್ತು ತದಭಿಮಾನಿ

ದೇವತಾ) ಭೂಮಿ, ಪುರುಷ ಮತ್ತು ಸ್ತ್ರೀ ಈ ಐದು ಸ್ಥಳಗಳಲ್ಲಿರುವ (5+(5×5) 25=30) ಶ್ರೀನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ಪಂಚಾತ್ಮಕ ವ್ಯೂಹದ ಮೂವತ್ತು ರೂಪಗಳನ್ನು ತಿಳಿದು ಕ್ರೀಡಿಸಿದರೆ ಸ್ತ್ರೀಸಂಗದೋಷವೇ ಬರುವುದಿಲ್ಲ. ಇದಕ್ಕೆ ಪಂಚಮಹಾಯಜ್ಞವೆಂದು ಪ್ರಸಿದ್ಧಿಯು. ಈ ವಿಷಯವು ಛಾಂದೋಗ್ಯೋಪ ನಿಷತ್ತಿನಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಇದನ್ನು ತಿಳಿದು ಇದರಂತೆ ಆಚರಿಸೋಣದರಿಂದ, ಪ್ರತಿಯೊಬ್ಬರೂ ಮೇಲೆ ಹೇಳಿದ ಐದು ಸ್ಥಳಗಳಲ್ಲಿದ್ದು ಜಗತ್ತಿಗೆ ಬಂದಿರುವದರಿಂದ, ತನ್ನಿಮಿತ್ತವಾದ ಋಣಗಳ ಪರಿಹಾರವಾಗುವುದು.

**ಮಿತ್ರಾಪಾನೌ ವಾಯುಸಂಸ್ಥೌ ಪ್ರದ್ಯುಮ್ನ ಸ್ತತ್ರ ಸಂಸ್ಥಿತಃ ।** ಪಾಯು
**ದಕ್ಷೋರು ಸಂಧಿಷು ಜ್ಞೇಯಂ ಟಂಕ್ಯಾದೀನಾಂ ಚ ಪಂಚಕಮ್ ॥೧೦೦॥**

ಮಿತ್ರನೆಂಬ ಸೂರ್ಯನು ಮತ್ತು ಅಪಾನನೆಂಬ ವಾಯುವು ಗುದದಲ್ಲಿರುವರು; ಅವರ ನಿಯಾಮಕನು ಪ್ರದ್ಯುಮ್ನನು; ಬಲದ ತೊಡೆಯಿಂದ ಕಾಲಿನವರಿಗಿನ ಐದು ಸಂದುಗಳಲ್ಲಿ ಟಂಕಿ, ಶಲಕ, ಡರಕ, ಧರಿಣ ಮತ್ತು ಣಾತ್ಮ ಎಂಬ ಐಮೂರ್ತಿಗಳನ್ನು ತಿಳಿಯುವುದು.

**ವಾಮೋರು ಸಂಧಿಷು ಜ್ಞೇಯಾ ಸ್ತಾರಾದ್ಯಾ ಪಂಚಮೂರ್ತಯಃ ।**
**ಜಯಂತಃ ಪಾದಯೋಃ ಸ್ತಸ್ಮಿನ್ ಯಜ್ಞೋ ನಾರಾಯಣಃ ಸ್ಥಿತಃ ॥೧೦೧॥**

ಎಡಗಾಲಿನ ಐದುಸಂದುಗಳಲ್ಲಿ ತಾರ, ಥಬ, ದಂಡಿ, ಧನ್ವಿ ಮತ್ತು ನವ್ಯ ಎಂಬ ಐಮೂರ್ತಿಗಳಿರುವರು; ಹೆಜ್ಜೆಗಳೆರಡರಲ್ಲಿಯೂ ಜಯಂತನೂ, ತನ್ನಿಯಾಮಕನಾಗಿ, ಯಜ್ಞನೆಂಬ ನಾರಾಯಣನೂ ಇರುವರು.

**ದಕ್ಷಿಣಾಂಗುಷ್ಠ ದೇಶೇತು ವಾಯ್ವಧಿಷ್ಠಾನ ಸಂಸ್ಥಿತಃ ।**
**ನಾರಾಯಣ ಸ್ತೀರ್ಥಪದೋ ದೇಹಾಧಾರತಯಾ ಸ್ಥಿತಃ ॥೧೦೨॥**

ಬಲದ ಕಾಲಿನ ಹೆಬ್ಬೆರಳಿನಲ್ಲಿ ವಾಯುವನ್ನು ಅಧಿಷ್ಠಾನಮಾಡಿಕೊಂಡು ತೀರ್ಥನೆಂಬ ನಾರಾಯಣನು ದೇಹಕ್ಕೆ ಆಧಾರನಾಗಿ ಇರುವನು.

**ತತ್ರ ಸರ್ವಾಣಿ ತೀರ್ಥಾನಿ ತಿಷ್ಠಂತ್ಯರಿಧರಾಜ್ಞಯಾ ।**
**ತಸ್ಮಾತ್ಸುಪಾವನಂ ವಿಪ್ರ ಪಾದಪ್ರಕ್ಷಾಲನೋದಕಮ್ ॥೧೦೩॥**

ಅಲ್ಲಿ ಚಕ್ರಧಾರಿಯಾದ ಶ್ರೀನಾರಾಯಣನ ಆಜ್ಞೆಯಿಂದ ಸಕಲ ತೀರ್ಥಗಳೂ ಇರುವುವು; ಬ್ರಾಹ್ಮಣನ ಪಾದಗಳನ್ನು ತೊಳೆದ ನೀರು ಅತ್ಯಂತ ಪವಿತ್ರವಾದುದು.

**ವಾಕ್ಪಾಣಿ ಪಾದ ಶ್ರೋತ್ರ ಮನೋ ಹೃದಯ ಸ್ಥಾನೇಷು ಚ ।**
**ಆಕಾಶಾಖ್ಯ ರಮಾರೂಪೇಷ್ವೇವಂ ರೂಪಾಣಿ ಚಿಂತಯೇತ್ ॥೧೦೪॥**

ವಾಕ್, ಕೈ, ಕಾಲು, ಕಿವಿ, ಮನಸ್ಸು, ಹೃದಯ ಈ ಸ್ಥಳಗಳಲ್ಲಿ ಆಕಾಶವಿರುವುದು; ಅಲ್ಲಿ ಶ್ರೀರಮಾದೇವಿಯ ರೂಪಗಳಿರುವುವು; ಅಲ್ಲಿ ಮುಂದೆ ಹೇಳುವ ಶ್ರೀಹರಿ ರೂಪಗಳನ್ನು ತಿಳಿಯುವುದು.

**ವಿಷ್ಣೋಃ ಪ್ರಜ್ಞಾ ಪ್ರಿಯಾ ಸತ್ಯಾಽನಂತಾ ನಂದಾ ಸ್ಥಿತಿಃ ಕ್ರಮಾತ್ ।**
**ಏತಚ್ಛಡ್ರೂಪವಿಜ್ಞಾನೀ ಷಡರೀನ್ಸ ಜಯಿಷ್ಯತಿ ॥೧೦೫॥**

ಶ್ರೀ ವಿಷ್ಣುವಿನ, ಪ್ರಜ್ಞಾ, ಪ್ರಿಯಾ, ಸತ್ಯಾ, ಅನಂತಾ, ನಂದಾ ಮತ್ತು ಸ್ಥಿತಿ ಎಂಬ ಆರು ರೂಪಗಳು ಕ್ರಮದಿಂದ ಇರುವುವು; ಇವುಗಳನ್ನು ಚೆನ್ನಾಗಿ ತಿಳಿದವನು ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಆರು ಶತ್ರುಗಳನ್ನು ಗೆಲ್ಲುವನು.

**ವ್ಯಾಪ್ತಶ್ಚ ಹೃದಯಾಕಾಶೇ ಪುರುಷಾಖ್ಯೋಽನಿರುದ್ಧಕಃ ।**
**ಪ್ರದ್ಯುಮ್ನಸ್ತಾಲು ದೇಶಸ್ಥೋ ಇಂದ್ರಯೋನಿ ರಿತಿ ಸ್ಮೃತಃ ॥೧೦೬॥**

ಹೃದಯದ ಅವಕಾಶದಲ್ಲಿ ಪುರುಷನೆಂಬ ಅನಿರುದ್ಧನು ತುಂಬಿರುವನು ; ದವಡೆಗಳಲ್ಲಿ ಪ್ರದ್ಯುಮ್ನನು ಇಂದ್ರಯೋನಿ ಎಂದು ಹೇಳಲ್ಪಡುವನು.

**ಶೀರ್ಷಾಂತಃ ಕೇಶಮೂಲೇ ತು ವೀತಿಃ ಸಂಕರ್ಷಣಃ ಸ್ಥಿತಃ ।**
**ಧ್ಯೇಯಃ ಶೀರ್ಷಕಪಾಲೋರ್ಧ್ವಂ ವಾಸುದೇವೋಽವ್ಯಯೋ**
**ಹರಿಃ ॥೧೦೭॥**

ತಲೆಯಮೇಲೆ ಕೂದಲುಗಳ ಮೂಲದಲ್ಲಿ ವೀತಿ ಎಂಬ ಸಂಕರ್ಷಣ ನಿರುವನು ; ತಲೆಯ ಕಪಾಲಗಳಮೇಲೆ ನಾಶರಹಿತನಾದ ಹರಿಯು ವಾಸುದೇವರೂಪವನ್ನು ತಿಳಿಯುವುದು.

**ಹೃದಯಾಂತಃ ಸ್ಥಿತೋ ವಿಷ್ಣುರ್ವಿಜ್ಞೇಯೋ ವಾಮನಾಭಿಧಃ ।**
**ಉಪಾಸ್ಯಃ ಸರ್ವದೇವೈಶ್ಚ ಪ್ರಾಣಾಪಾನಾದಿ ಚೇಷ್ಟಕಃ ॥೧೦೮॥**

ಹೃದಯದಲ್ಲಿ ವಾಮನರೂಪಿಯಾದ ವಿಷ್ಣುವಿರುವನು ; ಈತನು ಸಕಲ ದೇವತೆಗಳಿಂದ ಉಪಾಸಿಸಲ್ಪಡುವನು; ಮತ್ತು ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನರೆಂಬ ಐದು ಮಂದಿ ವಾಯುಗಳನ್ನು ಅವರವರ ಕಾರ್ಯದಲ್ಲಿ ನಿಯಮನಮಾಡುವನು.

**ಹೃತ್ಪದ್ಮ ಸಂಸ್ಥಿತೋಪಾಸ್ಯಾ ಗಾಯತ್ರೀ ಬ್ರಹ್ಮ ಸಂಮಿತಾ ।**
**ಗಾಯತ್ರ್ಯಂತಸ್ಸ್ಥಿತೋ ವಿಷ್ಣುರ್ಗಾಯತಿ ತ್ರಾಯತೆ ಯತಃ॥೧೦೯॥**

ಹೃದಯಕಮಲದಲ್ಲಿ ವೇದಸದೃಶವಾದ (ವೇದಮಾತೆಯಾದ) ಗಾಯತ್ರಿಯನ್ನು ಉಪಾಸನೆಮಾಡಬೇಕು ; ಆ ಗಾಯತ್ರಿಯಲ್ಲಿ ತನ್ನನ್ನು ಸ್ತುತಿಸುವವರನ್ನು ಸಂರಕ್ಷಿಸುವವನು ಎಂಬ ಕಾರಣದಿಂದ ಗಾಯತ್ರೀ ಎಂಬ ಹೆಸರಿನಿಂದಲೇ ಶ್ರೀಹರಿಯು ಇರುವನು.

ಗಾಯತ್ರೀ ನಾಮಕೋ ವಿಷ್ಣುಃ ಸ ಪ್ರಾಣಃ ಸ ಉದಾಹೃತಃ ।
ಪ್ರಾಣಾರ್ಕ ದ್ವಾರಪೋ ಪಾಸ್ಯಃ ಪ್ರಾಣಾಗ್ನ್ಯಾವೇವ
ಮೇವಹಿ ॥೧೧೦॥

ಈ ಗಾಯತ್ರೀ ಎಂಬ ವಿಷ್ಣುವು ಪ್ರಾಣನಿಂದ ಸಹಿತನಾಗಿದ್ದು ಪ್ರಾಣಾರ್ಕನೆಂಬ ದ್ವಾರಪಾಲಕನಿಂದ ಪ್ರಾಣಾಗ್ನಿಹೋತ್ರವೆಂಬ ಭೋಜನ ದಲ್ಲಿ ಉಪಾಸಿಸಲ್ಪಡುವನು.

ಮುಖಸ್ಥಾ ಹವನೀಯಾಗ್ನೌ ಹೋತಾ ಪ್ರಾಣೋ ಹೃದಿಸ್ಥಿತಃ ।
ಪ್ರಾಣಾಗ್ನಿಸ್ಥ ಹರೇಃ ಪೂರ್ವದ್ವಾರಪಃ ಪ್ರಾಣಭಾಸ್ಕರಃ ॥೧೧೧॥

ಮುಖದಲ್ಲಿ (ಬಾಯಿ) ಆಹವನೀಯವೆಂಬ ಅಗ್ನಿಯು ಅಲ್ಲಿ ಹೃದಯ ದಲ್ಲಿರುವ ಪ್ರಾಣನು ಹೋತೃವು; ಈ ಪ್ರಾಣಾಗ್ನಿಯಲ್ಲಿರುವ ಶ್ರೀಹರಿಯ ಪೂರ್ವದ (ಮುಂದುಗಡೆಯ) ದ್ವಾರಪಾಲಕನು ಪ್ರಾಣನೆಂಬ ಸೂರ್ಯನು.

ಜ್ಞಾತ್ವಾ ಪ್ರಾಣಾದ್ಯಧಿಷ್ಠಾನಂ ಕ್ರಮೇಣಾಹುತಿ ದಾನತಃ ।
ಪ್ರಾಣನಾಮಾನಿರುದ್ಧಾತ್ಮಾ ತೃಪ್ತೋ ವೈಶ್ವಾನರೋ ಹರಿಃ ॥೧೧೨॥

ಪ್ರಾಣ, ಅಪಾನರೇ ಮುಂತಾದ ಐದು ಪ್ರಾಣರು ಇರುವ ಸ್ಥಾನವನ್ನು ತಿಳಿದು ಕ್ರಮದಿಂದ ಆಹುತಿಗಳನ್ನು ಕೊಡುವದರಿಂದ ಪ್ರಾಣನಾಮಕ ಅನಿ ರುದ್ಧನು ತೃಪ್ತನಾಗುವನು; ಆತನೇ ವೈಶ್ವಾನರನೆಂಬ ಹರಿಯು.

ನಾಭಿಸ್ಥ ದಕ್ಷಿಣಾಗ್ನೌತು ಬ್ರಹ್ಮ ವ್ಯಾನಃ ಶರೀರಗಃ ।
ಅಗ್ನ್ಯಂತಸ್ಥ ಹರೇರ್ದಕ್ಷ ದ್ವಾಸ್ಥೋವ್ಯಾನ ನಿಶಾಕರಃ ॥೧೧೩॥

ನಾಭಿಯಲ್ಲಿ ದಕ್ಷಿಣಾಗ್ನಿಯು, ಅಲ್ಲಿ ಬ್ರಹ್ಮನ ಸ್ಥಾನದಲ್ಲಿ ಸರ್ವಶರೀರ ಗತನಾದ ವ್ಯಾನನೆಂಬ ವಾಯುವಿರುವನು; ಅಗ್ನಿಯಲ್ಲಿರುವ ಶ್ರೀಹರಿಯ ದಕ್ಷಿಣ ದ್ವಾರಪಾಲಕನು ವ್ಯಾನಚಂದ್ರರು.

ವ್ಯಾನನಾಮೇಂದ್ರಧಿಷ್ಣ್ಯಾನ ಕ್ರಮೇಣಾಹುತಿ ದಾನತಃ ।
ಪ್ರದ್ಯುಮ್ನಾತ್ಮಾ ವ್ಯಾನನಾಮಾ ತೃಪ್ತೋ ವೈಶ್ವಾನರೋ ಹರಿಃ ॥೧೧೪॥

ವ್ಯಾನನೆಂಬ ಚಂದ್ರನಲ್ಲಿರುವ ಶ್ರೀನಾರಾಯಣನಿಗೆ ಕ್ರಮದಿಂದ ಆಹುತಿಯನ್ನು ಕೊಟ್ಟರೆ ವ್ಯಾನನೆಂಬ ಪ್ರದ್ಯುಮ್ನನು ತೃಪ್ತನಾಗುವನು. ಈತನೂ ವೈಶ್ವಾನರನೆಂಬ ಹರಿಯೇ.

ತತೋ ಹೃದಿಸ್ಥಿತೇ ವಹ್ನೌ ಗಾರ್ಹಪತ್ಯಾಭಿಧೆ ಶುಭೇ ।
ಭವೇದಪಾನಶ್ಚೋದ್ಗಾತಾ ವಾಯುಸ್ಥೋಽಗ್ನಿ ಗತಸ್ಯ ಚ ॥೧೧೫॥

ಪ್ರತ್ಯಕ್ ದ್ವಾಸ್ಥೋ ಹ್ಯಪಾನಾಗ್ನಿಸ್ತದ್ದ್ವಾರಾಹುತಿ ದಾನತಃ ।
ಸಂಕರ್ಷಣಸ್ತ್ವಪಾನಾಖ್ಯೋ ತೃಪ್ತೋ ವೈಶ್ವಾನರೋ
ಹರಿಃ ॥೧೧೬॥

ನಂತರ ಹೃದಯದಲ್ಲಿ ಗಾರ್ಹಪತ್ಯನೆಂಬ ಅಗ್ನಿಯನ್ನು ತಿಳಿಯುವುದು; ವಾಯುವೆಂಬ ಅಗ್ನಿಯಲ್ಲಿರುವ ಅಪಾನನೆಂಬ ವಾಯುವು ಉದ್ಗಾತನು; ಈ ಅಪಾನಾಗ್ನಿಯು ಪಶ್ಚಿಮ ದ್ವಾರಪಾಲಕನು; ಇವನ ಮುಖದಿಂದ ಆಹುತಿಯನ್ನು ಕೊಡೋಣದ್ದರಿಂದ ಅಪಾನನಲ್ಲಿರುವ ಅದೇ ಶಬ್ದವಾಚ್ಯನಾದ ಸಂಕರ್ಷಣನು ಸಂತುಷ್ಟನಾಗುವನು.

ನಾಭ್ಯುತ್ತರಸ್ಥಿತೇ ವಹ್ನಾವವಸಥ್ಯಾಭಿಧಃ ಸ್ಮೃತಃ ।
ಯಜಮಾನೋ ನಾಭಿಸಂಸ್ಥೋ ಸಮಾನಾಗ್ನಿ ಗತಸ್ಯ ಚ ॥೧೧೭॥

ಉದಗ್ದ್ವಾಃಸ್ಥಃ ಸಮಾನೇಂದ್ರಸ್ತತ್ಕ್ರಮಾಹುತಿ ದಾನತಃ ।
ವಾಸುದೇವಃ ಸಮಾನಾಖ್ಯಸ್ತೃಪ್ತೋ ವೈಶ್ವಾನರೋ ಹರಿಃ ॥೧೧೮॥

ಹೊಕ್ಕಳಿನ ಎಡಗಡೆಯಲ್ಲಿ ಅವಸಥ್ಯವೆಂಬ ಅಗ್ನಿ ಇರುವುದು; ಅಲ್ಲಿ ಯಜಮಾನನಾಗಿ ನಾಭಿಯಲ್ಲಿಯೇ ಸಮಾನನೆಂಬ ವಾಯುವಿರುವನು;

ಆ ಅಗ್ನಿಯಲ್ಲಿರುವ ಈತನು ಉತ್ತರ ದ್ವಾರಪಾಲಕನು ಸಮಾನನೆಂಬ ಇಂದ್ರನು; ಈತನ ಕಡೆಯಿಂದ ಕ್ರಮವಾಗಿ ಆಹುತಿಯನ್ನು ಕೊಟ್ಟರೆ ಸಮಾನನೆಂಬ ವಾಸುದೇವನು ತೃಪ್ತನಾಗುವನು.

ನಾಭಿದಕ್ಷಸ್ಥ ಸಭ್ಯಾಗ್ನಾ ವಧ್ವರ್ಯುಃ ಕಂಠಗೋಽನಿಲಃ ।
ರಮಾವಿಷ್ಟಾಕಾಶನಾಮಕೋದಾನೋ ವಾಯುರೂರ್ಧ್ವಗಃ ॥೧೧೯॥

ಉದಾನ ವಾಯ್ವಧಿಷ್ಠಾನ ಕ್ರಮೇಣಾಹುತಿ ದಾನತಃ ।
ನಾರಾಯಣೋ ಉದಾನಾಖ್ಯ ಸ್ತೃಪ್ತೋ ವೈಶ್ವಾನರೋ ಹರಿಃ॥೧೨೦॥

ನಾಭಿಯ ಬಲಗಡೆಯಲ್ಲಿ ಸಭ್ಯವೆಂಬ ಅಗ್ನಿಯು; ಅಲ್ಲಿ ಕಂಠಗತನಾದ ಸಮಾನನೆಂಬ ವಾಯುವು ಅಧ್ವರ್ಯುವಾಗಿ ಇರುವನು; ಅವನು ಊರ್ಧ್ವ ಗಮನವುಳ್ಳವನು; ರಮಾದೇವಿಯ ಅಧಿಷ್ಠಾನನಾದ ಆಕಾಶನೆಂಬ ಉದಾನ ವಾಯುವು; ಇದನ್ನು ತಿಳಿದು ಆಹುತಿ ಕೊಡೋಣದ್ದರಿಂದ ನಾರಾಯಣ ನೆಂಬ ಉದಾನನು ತೃಪ್ತನಾಗುವನು.

ವಿಶ್ವೈ ರ್ಗುಣೈರುಪೇತತ್ವಾ ದ್ವೈಶ್ವೋ ನಂತತ್ವತೋ ನರಃ ।
ವೈಶ್ವಾನರ ಇತಿಪ್ರೋಕ್ತೋ ಸೋಗ್ರ್ಯ ಇತ್ಯಗ್ನಿ ರೀರಿತಃ ॥೧೨೧॥

ಅಸಂಖ್ಯ ಗುಣಗಳಿಂದ ಸಮೇತನಾದುದರಿಂದ "ವೈಶ್ವ"ನೆಂದೂ ನಾಶ ರಹಿತನಾದುದರಿಂದ 'ನರ'ನೆಂದೂ ಎರಡು ಪದಗಳನ್ನು ಸೇರಿಸಿದ್ದರಿಂದ 'ವೈಶ್ವಾನರ'ನೆಂದೂ ಎಲ್ಲರಿಗೂ ಶ್ರೇಷ್ಠನಾದುದರಿಂದ ಅಗ್ನಿಯೆಂದೂ ಹೇಳ ಲ್ಪಡುವನು.

ಪಂಚಪ್ರಾಣಾತ್ಮಕೋ ವಾಯು ರ್ಯಜ್ಞೇಸ್ಮಿನ್ ಸಂಪ್ರತಿಷ್ಠಿತಃ ।
ಅತೋ ವಾಯು ರ್ಯಜ್ಞನಾಮಾ ಯಜತ್ಯಗ್ನಿಗತಂ
ಹರಿಮ್ ॥೧೨೨॥

ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನನೆಂಬ ವಾಯುವು ಐದು ರೂಪದಿಂದ ಈ ಪ್ರಾಣಾಗ್ನಿಹೋತ್ರವೆಂಬ ಯಜ್ಞದಲ್ಲಿ ಚೆನ್ನಾಗಿ ಪ್ರಸಿದ್ಧನಾಗಿರುವನು ; ಆದುದರಿಂದ ಈ ಯಜ್ಞನಾಮಕ ವಾಯುವು ಅಗ್ನಿಯಲ್ಲಿ ಸನ್ನಿಹಿತನಾಗಿರುವ ಶ್ರೀಹರಿಯನ್ನು ಆರಾಧಿಸುವನು.

**ತಸ್ಮಾತ್ಪ್ರಾಣಾದಿ ಸಂಯುಕ್ತೋ ಜೀವದತ್ತಾನ್ನ ಮುತ್ತಮಮ್ ।**
**ಪಚತ್ಯೇಷಃ ಶುಭಂ ಸಾರಂ ಸ್ವೀಕರೋತಿ ನ ಚಾಪರಮ್ ॥೧೨೩॥**

ಆದುದರಿಂದ ಪ್ರಾಣಾದಿಗಳಿಂದ ಸಹಿತನಾಗಿ ಜೀವನಿಂದ ಕೊಡಲ್ಪಡುವ ಅನ್ನವನ್ನು ಜೀರ್ಣಮಾಡುವನು ; ಶುಭಸಾರವನ್ನು ಸ್ವೀಕರಿಸುವನು ; ಅಶುಭ ಅಸಾರವನ್ನು ಬಿಟ್ಟುಬಿಡುವನು.

**ತಸ್ಮಾದ್ವೈಶ್ವಾ ನರಸ್ತೃಪ್ತಃ ತೃಪ್ತಾಶ್ಚದ್ವಾರದೇವತಾಃ ।**
**ಏತದ್ವಿದ್ಯಾ ಸಾಧಕಸ್ಯ ಪ್ರಯಚ್ಛತ್ಯಕ್ಷಯಂ ಪದಮ್ ॥೧೨೪॥**

ಆದುದರಿಂದ ಈ ವೈಶ್ವಾನರನು ತೃಪ್ತನಾದರೆ ದ್ವಾರದಲ್ಲಿರುವ ಸಕಲ ದೇವತೆಗಳೂ ತೃಪ್ತರಾಗುವರು ; ಈ ವಿದ್ಯೆಯನ್ನು ಸಾಧಿಸುವವನಿಗೆ ನಾಶವಿಲ್ಲದ ಮುಕ್ತಿಯು ಸಿಗುವುದು.

**ಕೇಚಿತ್ಪ್ರಾಣಾಗ್ನಿ ಖಂಡೋಕ್ತ್ಯಾ ಪ್ರಾಣಾಪಾನಾದ್ಯನುಕ್ರಮಾತ್ ।**
**ವ್ಯವಸ್ಥಾ ಭೇದಮಾಶ್ರಿತ್ಯ ಜಯಂತಿ ಪ್ರಾಣಪಂಚಕಮ್ ॥೧೨೫॥**

ಕೆಲವರು ಈ ಪ್ರಾಣಾಗ್ನಿಖಂಡದಲ್ಲಿ ಹೇಳಿದ ಕ್ರಮದಿಂದ ಪ್ರಾಣಾಪಾನಾದಿ ಪಂಚವಾಯುಗಳನ್ನು ವ್ಯವಸ್ಥೆಯ ಭೇದಭಾವವನ್ನು ಆಶ್ರಯಿಸಿ ಆ ವಾಯುಗಳನ್ನು ಭಕ್ತಿಯಿಂದ ಗೆಲ್ಲುವರು.

**ಜಠರಾಗ್ನಿ ಸ್ಥಿತಂಚಾಗ್ನಿ ದೇವಂ ವೈಶ್ವಾನರಂ ಹರಿಮ್ ।**
**ಪಂಚಾತ್ಮಕೋ ಹರಿಃ ಸಾಕ್ಷಾದ್ಭೋಕ್ತಾ ಪ್ರಾಣಾಂ ಹೃದಯೇ ಸ್ಥಿತಃ ॥೧೨೬॥**

ಹಾಗೆಯೇ ಜಠರಾಗ್ನಿಯಲ್ಲಿರುವ ಅಗ್ನಿಯು ಚೇಷ್ಟಕನಾದ ವೈಶ್ವಾನರನೆಂಬ ಹರಿಯನ್ನು ಭಕ್ತಿಯಿಂದ ವಶಮಾಡಿಕೊಳ್ಳುವರು; ಅನಿರುದ್ಧಾದಿ ಐರೂಪಿಯಾದ ಹರಿಯು ಭೋಜನಮಾಡುವ ಸಕಲರ ಹೃದಯದಲ್ಲಿರುವನು.

ಸಂಕರ್ಷಣಶ್ಚ ಪ್ರದ್ಯುಮ್ನೋ ಭೋಕ್ತೃ ಭೋಜನ ಶಕ್ತಿದೌ ।
ಭೋಕ್ತಾರೌ ಚ ವಿಶೇಷೇಣ ವಾಸುದೇವೋಽವಕಾಶದಃ ॥೧೨೭॥

ನಾರಾಯಣಾನಿರುದ್ಧೌ ತು ಭೋಜ್ಯವಸ್ತುಷು ಸಂಸ್ಥಿತೌ ।
ಏವಂ ಪಂಚಾತ್ಮಕಂ ಜ್ಞಾತ್ವಾ ಸ ಭವೇದಮೃತಾಶನಃ ॥೧೨೮॥

ಶ್ರೀ ಸಂಕರ್ಷಣ ಮತ್ತು ಪ್ರದ್ಯುಮ್ನನು ಭೋಜನಮಾಡುವವರಿಗೆ ಆ ಶಕ್ತಿಯನ್ನು ಕೊಡುವರು ಮತ್ತು ಭೋಜನಮಾಡುವವರು; ವಾಸುದೇವನು ಅವಕಾಶವನ್ನು ಕೊಡುವವನು; ನಾರಾಯಣ ಮತ್ತು ಅನಿರುದ್ಧ ಈ ಈರ್ವರೂ ಭುಂಜಿಸುವ ಪದಾರ್ಥಗಳಲ್ಲಿರುವವರು; ಊಟಮಾಡುವಾಗ ಈ ಐರೂಪಗಳನ್ನು ತಿಳಿದವರು ಅಮೃತವನ್ನೇ ಭುಂಜಿಸುವರು.

ಆತ್ಮಾಂತರಾತ್ಮಾ ಜ್ಞಾತ್ಮಾ ಚ ದ್ವಿಧಾ ಭೂತ್ವಾ ಹೃದಿ ಸ್ಥಿತಃ ।
ಜೀವ ಸತ್ಕರ್ಮ ಜನಿತಂ ರಸ ಮಶ್ನಾತಿ ನಿತ್ಯಶಃ ॥೧೨೯॥

ಸರ್ವಜ್ಞನಾದ ಶ್ರೀಹರಿಯು ಆತ್ಮ ಮತ್ತು ಅಂತರಾತ್ಮನೆಂಬ ಎರಡು ರೂಪದಿಂದ ಹೃದಯದಲ್ಲಿದ್ದು ಜೀವರ ಸತ್ಕರ್ಮದಿಂದ ಬರುವ ಶುಭಫಲವನ್ನು ನಿತ್ಯದಲ್ಲಿಯೂ ಚೆನ್ನಾಗಿ ಭುಂಜಿಸುವನು.

ವಾಯುಃ ಪ್ರಸ್ತೌತಿ ವಿಚ್ಛಿನ್ನ ಘೋಷರೂಪೇಣ ಸರ್ವದಾ ।
ಕರ್ಣೌ ಪಿಧಾಯ ಸಾ ಸರ್ವೈಃ ಶ್ರೂಯತೆ ಲೋಕಮಂಗಳಾ ॥೧೩೦॥

ವಾಯುವು ಯಾವಾಗಲೂ ಅವಿಚ್ಛಿನ್ನ ಧ್ವನಿರೂಪದಿಂದ ಸ್ತುತಿಸುತ್ತಲಿರುವನು; ಕಿವಿಗಳೆರಡನ್ನೂ ಮುಚ್ಚಿದರೆ ಆ ಲೋಕ ಮಂಗಳಧ್ವನಿಯು ಸಕಲರಿಂದಲೂ ಕೇಳಲ್ಪಡುವುದು.

ಘೋಷ ರೂಪಾಸ್ತು ತಿರ್ನೈವಶ್ರೂಯತೇ ಯೇನಜಂತುನಾ ।
ಅಚಿರೇಣೈವ ಕಾಲೇನ ಸ ದೇಹಾದುತ್ಕ್ರಮಿಷ್ಯತಿ ॥೧೩೧॥

ಈ ಸ್ತುತಿರೂಪ ಧ್ವನಿಯು ಯಾವಾಗ ಯಾವನೊಬ್ಬ ಜೀವನಿಂದ ಕೇಳಲ್ಪಡುವದಿಲ್ಲವೋ ಅವನು ಸ್ವಲ್ಪಕಾಲದಲ್ಲಿಯೇ ಈ ದೇಹವನ್ನು ಬಿಡುತ್ತಾನೆಂದು ನಿಶ್ಚಯವು.

ಯ ಏವಂ ವೇದ ತೇನೈವ ಸ್ತುತ ಏವ ಭವೇದ್ಧರಿಃ ॥೧೩೨॥

ಹೀಗೆ ತಿಳಿಯುವ ಮಾತ್ರದಿಂದಲೇ ಶ್ರೀಹರಿಯನ್ನು ಸ್ತುತಿಸಿದಂತಾಗುವುದು.

ಅವ:—ಈಗ ದೇಹವೆಂಬುದು ವಿಷ್ಣುರಥವೆಂದು ಹೇಳುತ್ತಾ ತತ್ಕ್ರಮವನ್ನು ತಿಳಿಸುತ್ತಾರೆ:—

ವಿಷ್ಣೋ ರಾಯತನಂ ದಿವ್ಯಂ ದೇಹಾಖ್ಯಂ ವೈಷ್ಣವಂ ರಥಮ್ ।
ಸೂರ್ಯಶ್ಚ ಸೂರ್ಯಭಾರ್ಯಾ ಚ ಚಕ್ಷುರ್ದ್ವಂದ್ವಂ
ಸಮಾಶ್ರಿತೌ ॥೧೩೩॥

ಶ್ರೀ ವಿಷ್ಣುವು ವಾಸವಾಗಿರುವ ಈ ದಿವ್ಯದೇಹವು ವೈಷ್ಣವ ರಥವು; ಸೂರ್ಯನು ಮತ್ತು ತತ್ಪತ್ನಿಯಾದ ಸಂಜ್ಞಾದೇವಿಯು ಎರಡು ಕಣ್ಣುಗಳಲ್ಲಿ ಕುದುರೆಗಳ ಆಕಾರದಿಂದಿರುವರು.

ವಾಜಿರೂಪೌ ತಥಾ ಸೋಮ ಸ್ತತ್ಪತ್ನೀ ಚ ಶ್ರುತಿಸ್ಥಿತೌ ।
ಹಯಾಕಾರಾ ವಹಂತ್ಯೇತೇ ತದ್ಬಂಧ ಪ್ರಗ್ರಹಾತ್ಮಿಕಾ ॥೧೩೪॥

ಉಮಾ ವಾಚಿ ಸ್ಥಿತಾ ಜ್ಞೇಯಾ ತತ್ಪತಿ ರ್ಮನಸಿ ಸ್ಥಿತಃ ।
ಸಂಪ್ರೋಕ್ತ ಸ್ಸಾರಥಿ ಸ್ತಸ್ಮಿನ್ ರಥೇ ಪ್ರಾಣಃ ಪ್ರತಿಷ್ಠಿತಃ ॥೧೩೫॥

ಹಾಗೆಯೇ ಕುದುರೆಯ ಆಕಾರದಿಂದಲೇ ಚಂದ್ರನು, ತತ್ಪತ್ನಿಯಾದ ರೋಹಿಣೀದೇವಿಯು ಕಿವಿಗಳೆರಡರಲ್ಲಿರುವರು; ಈ ನಾಲ್ಕು ಮಂದಿಗಳೂ ಈ ರಥವನ್ನು ಸೆಳೆಯುವ ಕುದುರೆಗಳು; ಇವುಗಳನ್ನು ಬಂಧಿಸುವ ಹಗ್ಗದಂತೆ ಉಮಾದೇವಿಯರು ವಾಕ್ಕಿನಲ್ಲಿರುವರು; ಈ ಹಗ್ಗವನ್ನು ಹಿಡಿದು ರಥದ ಸಾರಥಿ (ನಡೆಸುವವ) ಯಾಗಿ ಉಮಾಪತಿಯಾದ ಮಹಾರುದ್ರದೇವರು ಮನಸ್ಸಿನಲ್ಲಿರುತ್ತಾರೆ. ಈ ರಥದಲ್ಲಿ ಮುಖ್ಯಪ್ರಾಣದೇವನೇ ರಥಿಕನು.

**ಪ್ರಕೃಷ್ಟ ಜ್ಞಾನರೂಪತ್ವಾತ್ಪ್ರಾಣೋ ವೈ ವಿಶ್ವನಾಮಕಃ ।**
**ಅಧಿತಿಷ್ಠತಿ ವೈ ವಿಷ್ಣುಸ್ತಸ್ಮಾದ್ದೇಹ ಮಲಂಚರೇತ್ ॥೧೩೬॥**

ನಿರ್ದೋಷವಾದ ಉತ್ತಮ ಜ್ಞಾನಸ್ವರೂಪಿಯಾದ ವಿಶ್ವನೆಂಬ ಹೆಸರಿನಿಂದ ಪ್ರಾಣನಲ್ಲಿ ಶ್ರೀವಿಷ್ಣುವೂ ಇರುವನು; ಆದುದರಿಂದ ಈ ದೇಹವನ್ನು ಆಭರಣ ವಸ್ತ್ರಾದಿಗಳಿಂದ ಅಲಂಕಾರಮಾಡಿಕೊಳ್ಳುವುದು.

**ಏತಾದೃಶಸ್ಯ ದೇಹಸ್ಯ ವೃಷಣಾಸನಯೋರಪಿ ।**
**ಮಧ್ಯೇಕಂದಂ ವಿಜಾನೀಯಾ ದ್ವರ್ತುಲಂ ದ್ವ್ಯಂಗುಲೋಚ್ಛ್ರಿತಮ್ ॥೧೩೭॥**
**ಚತುರಂಗುಲ ವಿಸ್ತಾರಂ ದೇಹಾಧಾರಂ ಮಹತ್ತರಮ್ ।**
**ಆಸ್ಥಾನಂ ಸರ್ವನಾಡೀನಾಂ ಮೂಲಾಧಾರಂ ತದುಚ್ಯತೆ ॥೧೩೮॥**

ಇಂತಹ ದೇಹದ ವೃಷಣ ಮತ್ತು ಆಸನಗಳ ಮಧ್ಯದಲ್ಲಿ ವರ್ತುಳಾಕಾರವಾದ ಎರಡಂಗುಲ ಎತ್ತರವಾದ ಮತ್ತು ಸಕಲ ನಾಡಿಗಳಿಗೆ ಆಶ್ರಯವಾದ ಒಂದು ಗಡ್ಡೆ ಇರುವುದು; ಅದನ್ನು ಮೂಲಾಧಾರವೆನ್ನುವರು.

**ತನ್ಮಧ್ಯದೇಶಮಾರಭ್ಯ ತ್ವಾಮೂರ್ಧಾನಮೃಜು ಸ್ಥಿತಾ ।**
**ಸೂಕ್ಷ್ಮಾ ಸುಷುಮ್ನಾ ವಿಜ್ಞೇಯಾ ವೇಣುವದ್ವಿವರಾನ್ವಿತಾ ॥೧೩೯॥**

ಆದರ ಮಧ್ಯದೇಶವನ್ನಾರಂಭಿಸಿ ಶಿರಸ್ಸಿನ ಬ್ರಹ್ಮರಂಧ್ರದವರಿವಿಗೂ ನೆಟ್ಟಗೆ ಅತಿಸೂಕ್ಷ್ಮವಾಗಿ ಬಿದುರಿನ ಕೊಳವಿಯಂತೆ ಒಂದು ನಾಡಿ ಇರುವುದು; ಇದನ್ನು ಸುಷುಮ್ನಾ ಎಂದು ಹೇಳುವರು.

**ಸೈವ ಪಂಚ ವಿಶೇಷಾಂಶ್ಚ ವಜ್ರಿಕಾರ್ಯಾಪ್ರಕಾಶಿನೀ।**
**ವೈದ್ಯುತಾ ಬ್ರಹ್ಮನಾಡೀತಿ ವಿಜ್ಞೇಯಾ ಸಾಯಕಾದಿವತ್ ॥೧೪೦॥**

ವಜ್ರಿಕಾ, ಆರ್ಯಕಾ, ಪ್ರಕಾಶಿನೀ, ವೈದ್ಯುತಾ ಮತ್ತು ಸುಷುಮ್ನಾ ಎಂದು ಐದು ಶಾಖೆಗಳುಳ್ಳದ್ದೆಂದು ತಿಳಿಯುವುದು; ಇದಕ್ಕೆ ಬ್ರಹ್ಮನಾಡಿ ಎಂದು ಪ್ರಸಿದ್ಧಿಯು.

**ಸುಷುಮ್ನಾ ಮೂಲಮಾರಭ್ಯ ವಜ್ರಿಕಾದ್ಯಂಶಕೇಶುಚ।**
**ಪಂಚಪಂಚಾ ರವಿಂದಾನಿ ಹ್ಯಾಮೂರ್ಧಾನಂತು**
**ಯೋಜಯೇತ್ ॥೧೪೧॥**

ಸುಷುಮ್ನಾ ನಾಡಿಯ ಬುಡವನ್ನು ಆರಂಭಿಸಿ ವಜ್ರಿಕಾದಿ ಅಂಶ ನಾಡಿಗಳಲ್ಲಿ ಐದೈದು ಕಮಲಗಳನ್ನು ಶಿರಸ್ಸಿನವರಿವಿಗೂ ಯೋಜಿಸಬೇಕು.

**ಪೃಷ್ಠಾಂಶ ವಜ್ರಿಕಾಸಂಸ್ಥಃ ಪ್ರದ್ಯುಮ್ನಶ್ಚ ಹರಿತ್ಪ್ರಭಃ।**
**ವಾಮಾಂಶಾರ್ಯಾ ಗತಶ್ಚಿಂತ್ಯೋ ನೀಲವರ್ಣೋಽ**
**ನಿರುದ್ಧಕಃ ॥೧೪೨॥**

**ತತ್ಪುರೋಂಶ ಪ್ರಕಾಶಿನ್ಯಾಂ ವಾಸುದೇವಃ ಸಿತ ಪ್ರಭಃ।**
**ದಕ್ಷಾಂಶ ಬ್ರಹ್ಮನಾಡ್ಯಾಂತು ಧ್ಯೇಯೋ ನಾರಾಯಣೋಽ**
**ರುಣಃ ॥೧೪೩॥**

ಪೃಷ್ಠ (ಹಿಂದಿನ) ಭಾಗದಲ್ಲಿರುವ ವಜ್ರಿಕಾನಾಡಿಯಲ್ಲಿ ಹಳದೀ ಬಣ್ಣದಿಂದ ಪ್ರದ್ಯುಮ್ನನೂ, ಎಡಗಡೆಯ ಆರ್ಯಕಾನಾಡಿಯಲ್ಲಿ ನೀಲಬಣ್ಣದಿಂದ

ಅನಿರುದ್ಧನೂ, ಮುಂಭಾಗದ ಪ್ರಕಾಶಿನೀ ನಾಡಿಯಲ್ಲಿ ಬಿಳಿಯ ಬಣ್ಣದಿಂದ ವಾಸುದೇವನೂ, ಬಲಗಡೆಯ ವೈದ್ಯುತಾ ನಾಡಿಯಲ್ಲಿ ಪಿಂಗಳ (ಕಪಿಲ) ವರ್ಣ ದಿಂದ ಸಂಕರ್ಷಣನೂ ಮತ್ತು ಮಧ್ಯದ ಬ್ರಹ್ಮನಾಡಿಯಲ್ಲಿ ಕೆಂಪುಬಣ್ಣ ದಿಂದಿರುವ ನಾರಾಯಣನೂ ಧ್ಯಾನಿಸಲ್ಪಡುವರು.

**ಸುಷುಮ್ನಾ ಮೂಲದೇಶಸ್ಯ ಚತುರ್ದಿಕ್ಷು ಚ ಮಧ್ಯತಃ ।**
**ಚತುಷ್ಪತ್ರಾರುಣಾನಾಂ ಪಂಚಕಂ ತೇಷ್ವನುಕ್ರಮಾತ್ ॥೧೪೪॥**
**ಚಿಂತಯೇ ದನಿರುದ್ಧಾದಿ ಪಂಚರೂಪಾಣಿ ಸಾಧಕಃ ॥**

ಸುಷುಮ್ನಾ ನಾಡಿಯ ನಾಲ್ಕು ದಿಕ್ಕುಗಳಲ್ಲಿಯೂ ಮತ್ತು ಮಧ್ಯ ದಲ್ಲಿಯೂ ನಾಲ್ಕು ದಳಗಳಿಂದ ಕೂಡಿ ಕೆಂಪುವರ್ಣದ ಐದು ಕಮಲಗಳನ್ನೂ, ಅನಿರುದ್ಧ–ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ನಾರಾಯಣರೆಂಬ ಐದು ರೂಪಗಳನ್ನು ತಿಳಿಯುವುದು.

**ತತಃ ಸುಷುಮ್ನಾಸಂಸಕ್ತ ನಾಭಿ ಸಂಸ್ಥೇಷು ಪಂಚಸು ।**
**ಷಡ್ದಲಾರುಣ ಪದ್ಮೇಷು ಹ್ಯನಿರುದ್ಧಾದಿಕಾನ್ ಸ್ಮರೇತ್ ॥೧೪೫॥**

ನಂತರ ಸುಷುಮ್ನಾ ನಾಡಿಯಲ್ಲಿ ಸೇರಿದ ಹೊಕ್ಕಳಿನಲ್ಲಿರುವ ಐದು ನಾಡಿಗಳಲ್ಲಿ ಕೆಂಪುವರ್ಣದ ಆರು ದಳಾತ್ಮಕವಾದ ಐದು ಕಮಲಗಳನ್ನೂ ಅವುಗಳಲ್ಲಿ ಅನಿರುದ್ಧಾದಿ ಐದು ರೂಪಗಳನ್ನೂ ಸ್ಮರಿಸಬೇಕು.

**ಸುಷುಮ್ನಾ ಮಧ್ಯದೇಶಸ್ಥಂ ಹೃತ್ಪದ್ಮಂ ಚಾಷ್ಟಪತ್ರಕಮ್ ।**
**ದ್ವಾತ್ರಿಂಶತ್ಕೇಸರೋಪೇತ ಮಮಲಾರುಣ ಕಾಂತಿಮತ್ ॥೧೪೬॥**

ಆ ಸುಷುಮ್ನಾ ನಾಡಿಯ ಮಧ್ಯದಲ್ಲಿ ಎಂಟು ದಳಾತ್ಮಕವಾದ ಅದ ರೊಳಗಡೆಯಲ್ಲಿ ಮೂವತ್ತೆರಡು ಕೇಸರಗಳಿಂದ ಕೂಡಿದ ನಿರ್ಮಲವಾದ ಕೆಂಪಿನಂತೆ ಪ್ರಕಾಶಿಸುವ ಹೃದಯಕಮಲವಿರುವುದು.

ಅಂತಃ ಕುಂಚಿತ ಪತ್ರತ್ವಾ ದಧೋಮುಖಮಿತಿ ಸ್ಮೃತಮ್ ।
ತನ್ನಾಡ್ಯುದ್ಗತ ನಾಲತ್ವಾ ದೂರ್ಧ್ವನಾಲ ಮಿತೀ ರಿತಮ್ ॥೧೪೭॥

ಅದರ ದಳಗಳೆಲ್ಲವೂ ಮುದುರಿಕೊಂಡಿರುವದರಿಂದ ಅಧೋಮುಖ ವಾಗಿರುವುದೆಂದೂ ಆ ನಾಡಿಯು ಮೇಲಕ್ಕೆ ಹೋಗಿರುವುದರಿಂದ ಊರ್ಧ್ವ ನಾಲವೆಂದು ಹೇಳಲ್ಪಡುವುದು.

ಏತತ್ಪದ್ಮೋದರಂ ದಿವ್ಯಂ ಸಂಪುಟಂ ತತ್ಪ್ರಚಕ್ಷತೆ ।
ತತ್ಕರ್ಣಿಕಾಸ್ಥಿತಂ ಬಿಂಬಂ ಧ್ಯಾಯೇನ್ನಾರಾಯಣಾಭಿಧಮ್॥೧೪೮॥

ಈ ಕಮಲದ ಮಧ್ಯ (ಹೊಟ್ಟೆಯ) ಭಾಗವು ಸಂಪುಟವೆಂದು ಹೇಳ ಲ್ಪಡುವುದು ; ಅದರ ಕರ್ಣಿಕೆಯಲ್ಲಿ ನಾರಾಯಣನೆಂಬ ಬಿಂಬನನ್ನು ಧ್ಯಾನ ಮಾಡಬೇಕು.

ತಚ್ಚತು ಷ್ಪಾರ್ಶ್ವ ಗೇಷ್ವಷ್ಟ ಪತ್ರಾಬ್ಜೇಷ್ವಪಿ ಚಿಂತಯೇತ್ ।
ಅನಿರುದ್ಧಾದಿ ಚತ್ವಾರಿ ರೂಪಾಣೀ ತ್ಯಬ್ಜ ಪಂಚಕಮ್ ॥೧೪೯॥

ಅದರ ನಾಲ್ಕು ದಿಕ್ಕುಗಳಲ್ಲಿಯೂ ಇರುವ ನಾಲ್ಕು, ಎಂಟು ದಳಾತ್ಮಕ, ಕಮಲಗಳಲ್ಲಿಯೂ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ ಮತ್ತು ವಾಸು ದೇವ ಎಂಬ ನಾಲ್ಕು ರೂಪಗಳನ್ನು ಧ್ಯಾನಿಸಬೇಕು. ಹೀಗೆಯೇ ಇಲ್ಲಿಯೂ ಕಮಲಗಳು ಐದು.

ಹೃದಯೋರ್ಧ್ವ ಪ್ರದೇಶೇಪಿ ದ್ವಿಷಟ್ಪತ್ರಾರುಣಾಂಬುಜಮ್ ।
ತಸ್ಮಿನ್ ಪಂಚಾತ್ಮಕೋ ವಿಷ್ಣುರ್ಧ್ಯೇಯಃ ಸಿದ್ಧಿಮಭೀಪ್ಸಿತಾ ॥೧೫೦॥

ಹೃದಯದ ಮೇಲೆ ಉರಸ್ಸು ಎಂಬಲ್ಲಿ ಹನ್ನೆರಡು ದಳಾತ್ಮಕವಾದ ಕೆಂಪುವರ್ಣದ ಐದು ಕಮಲಗಳಿರುವುವು ; ಸಿದ್ಧಿಯನ್ನು ಆಶಿಸುವವನು ಅಲ್ಲಿಯೂ ಅನಿರುದ್ಧಾದಿ ವಿಷ್ಣುವಿನ ಐದು ರೂಪಗಳನ್ನು ಧ್ಯಾನಮಾಡಬೇಕು.

ಕಂಠೇ ಸುಷುಮ್ನಾ ಸಂಸಕ್ತಾ ತಾಲು ಮಧ್ಯೇಚ ದಿಕ್ಷ್ವಪಿ ।
ದ್ವಿದಲಃ ಶ್ವೇತಪತ್ರಾಬ್ಜೇ ಷ್ವನಿರುದ್ಧಾದಿಕಾನ್ ಸ್ಮರೇತ್ ॥೧೫೧॥

ಗಂಟಲಿನಲ್ಲಿ ಸುಷುಮ್ನಾ ನಾಡಿಗೆ ಸೇರಿದಂತೆ ದವಡೆಗಳಲ್ಲಿಯೂ ಮಧ್ಯದಲ್ಲಿಯೂ ಬಿಳಿಯ ಬಣ್ಣದ ಎರಡು ದಳಗಳುಳ್ಳ ಐದು ಕಮಲಗಳನ್ನೂ ಅವುಗಳಲ್ಲಿ ಅನಿರುದ್ಧಾದಿ ಪಂಚರೂಪಗಳನ್ನೂ ಧ್ಯಾನಮಾಡುವುದು.

ಭ್ರುವೋರಂತಃ ಸುಷುಮ್ನಾಯಾಃ ಪಾರ್ಶ್ವಮಧ್ಯಸ್ಥಿತೇಷು ಚ ।
ಚತುರ್ದಲ ಸಿತಾಬ್ಜೇಷು ಹ್ಯನಿರುದ್ಧಾದಿ ಪಂಚಕಮ್ ॥೧೫೨॥

ಹುಬ್ಬುಗಳ ಮಧ್ಯದಲ್ಲಿ ಸುಷುಮ್ನಾ ನಾಡಿಯೂ ಅದರ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ದಳಾತ್ಮಕವಾದ ಬಿಳಿಯಬಣ್ಣದ ಐದು ಕಮಲಗಳಿರುವುವು; ಅವುಗಳಲ್ಲಿ ಅನಿರುದ್ಧಾದಿ ಐದು ರೂಪಗಳನ್ನು ಧ್ಯಾನಿಸಬೇಕು.

ಮೂರ್ಧ್ನ್ಯಂತಸ್ಥ ಸುಷುಮ್ನಾಯಾಶ್ಚತುಷ್ಪಾರ್ಶ್ವ ಗತೇಷು ಚ ।
ದ್ವಾದಶ ಶ್ವೇತಪತ್ರಾಬ್ಜ ಪಂಚಕೇಷು ಯಥಾಕ್ರಮಮ್ ॥೧೫೩॥
ಚಿಂತಯೇದನಿರುದ್ಧಾದಿ ಪಂಚರೂಪಾಣಿ ವೈ ಹರೇಃ ॥

ಶಿರಸ್ಸಿನ ಮಧ್ಯದಲ್ಲಿರುವ ಸುಷುಮ್ನಾ ನಾಡಿಯ ನಾಲ್ಕು ಪಕ್ಕಗಳಲ್ಲಿಯೂ ಮತ್ತು ಮಧ್ಯದಲ್ಲಿಯೂ ಹನ್ನೆರಡು ದಳಗಳುಳ್ಳ ಬಿಳಿಯ ಐದು ಕಮಲಗಳನ್ನೂ ಅವುಗಳಲ್ಲಿ ಅನಿರುದ್ಧಾದಿ ಐದುರೂಪಗಳನ್ನೂ ಧ್ಯಾನಿಸಬೇಕು.

ಏತನ್ಮೂರ್ಧಾನ ಮಾರಭ್ಯ ದ್ವಾದಶಾಂಗುಲಿಕೋಽಪರಿ ।
ಸ ಛತ್ರವ ದ್ದ್ವಿಷಟ್ ಶ್ವೇತ ಪತ್ರಾಬ್ಜಂ ತತ್ರ ಚಿಂತಯೇತ್ ॥೧೫೪॥

ಈ ಮೂರ್ಧನಿಸ್ಥಾನ (ನಡುನೆತ್ತಿ) ವನ್ನು ಪ್ರಾರಂಭಿಸಿಕೊಂಡು ಹನ್ನೆರಡಂಗುಲಗಳ ಮೇಲೆ ಛತ್ರಿಯಂತೆ ಬೆಳ್ಳಗಿರುವ ಹನ್ನೆರಡು ದಳದ ಕಮಲವನ್ನು ಧ್ಯಾನಮಾಡುವುದು.

ತುರೀಯಾಖ್ಯಂ ವಾಸುದೇವಂ ಮೋಕ್ಷದಂ ಕರ್ಮಸಾಕ್ಷಿಗಮ್ ।
ಏವಂ ದ್ವಾತ್ರಿಂಶದಬ್ಜಸ್ಥ ಮಚ್ಯುತಂ ಚಿಂತಯೇದ್ಧರಿಮ್ ॥೧೫೫॥

ಅಲ್ಲಿ ತುರೀಯನೆಂಬ ಮುಕ್ತಿದಾಯಕನಾದ ಮತ್ತು ಕರ್ಮಸಾಕ್ಷಿಯಾದ ಶ್ರೀವಾಸುದೇವನನ್ನು ತಿಳಿಯುವುದು; ಹೀಗೆ ಮೂವತ್ತೆರಡು ಕಮಲಗಳಲ್ಲಿರುವ ಚ್ಯುತಿರಹಿತನಾದ ಶ್ರೀಹರಿಯನ್ನು ಧ್ಯಾನಮಾಡುವುದು.

ತದ್ವಿಜ್ಞಾನ ಧ್ಯಾನಸಾಮರ್ಥ್ಯಾ ದ್ಭವಬಂಧಾದ್ವಿ ಮುಚ್ಯತೆ ॥೧೫೫॥

ಹೀಗೆ ತಿಳಿದು ಧ್ಯಾನಮಾಡುವದರ ಬಲದಿಂದ ಸಂಸಾರ ಬಂಧನದಿಂದ ಬಿಡುಗಡೆಯಾಗುವುದು.

ಸುಷುಮ್ನಾಯಾ ಶ್ಚತುರ್ದಿಕ್ಷು ಜ್ಞೇಯಾಃ ಪೂರ್ವಾದಿಷು
ಕ್ರಮಾತ್ ।
ಧಾರಿಣೀ ಪಿಂಗಲಾ ಚೈವ ವಜ್ರಿಕೇಲೇತಿ ನಾಡಿಕಾಃ ॥೧೫೬॥

ಈ ಸುಷುಮ್ನಾನಾಡಿಯ ಪೂರ್ವದಲ್ಲಿ ಧಾರಿಣೀನಾಡಿಯೂ, ದಕ್ಷಿಣದಲ್ಲಿ ಪಿಂಗಳಾ ನಾಡಿಯೂ, ಪಶ್ಚಿಮದಲ್ಲಿ ವಜ್ರಿಕಾ ನಾಡಿಯೂ, ಮತ್ತು ಉತ್ತರದಲ್ಲಿ ಇಲಾನಾಡಿಯೂ ಇರುವುವು.

ಸುಷುಮ್ನಾ ಬ್ರಹ್ಮದೈವತ್ಯಾ ಪಿಂಗಳಾ ಸೂರ್ಯದೈವಿಕಾ ।
ಇಲಾವೈ ಚಂದ್ರ ದೈವತ್ಯಾ ವಿಜ್ಞೇಯಾ ಸ್ತಾ
ಯಥಾಕ್ರಮಮ್ ॥೧೫೭॥

ಸುಷುಮ್ನಾನಾಡಿಯ ಅಭಿಮಾನಿಯು ಬ್ರಹ್ಮದೇವನು; ಪಿಂಗಳಾ ನಾಡಿಗೆ ಸೂರ್ಯದೇವನೂ, ಇಲಾನಾಡಿಗೆ ಚಂದ್ರದೇವನೂ ಅಭಿಮಾನಿಗಳೆಂದು ಕ್ರಮವಾಗಿ ತಿಳಿಯುವುದು.

ಧಾರಿಣ್ಯಾಂ ವಾಸುದೇವಾಖ್ಯ ಸ್ಫಟಿಕಾಮಲಕಾಂತಿಮಾನ್ ।
ಪಿಂಗಳಾಯಾಂ ಪಿಂಗಳಾಭ ಶ್ಚಿಂತ್ಯಃ ಸಂಕರ್ಷಣಾಭಿಧಃ ॥೧೫೮॥

ವಜ್ರಿಕಾಯಾಂ ಪೀತವರ್ಣೋ ವೇದ್ಯಃ ಪ್ರದ್ಯುಮ್ನನಾಮಕಃ ।
ಇಲಾಯಾಮನಿರುದ್ಧಾಖ್ಯಶ್ಚಿಂತ್ಯಃ ಶಾಮಲದೀಪ್ತಿಮಾನ್ ॥೧೫೯॥

ಸ್ಫಟಿಕದಂತೆ ನಿರ್ಮಲವಾದ ವಾಸುದೇವನನ್ನು ಧಾರಿಣೀ ಎಂಬ ಕಪಿಲವರ್ಣದ ಸಂಕರ್ಷಣನನ್ನು ಪಿಂಗಳಾನಾಡಿಯಲ್ಲಿಯೂ ವಜ್ರಿಕಾನಾಡಿಯಲ್ಲಿ ಹೊಂಬಣ್ಣದ ಪ್ರದ್ಯುಮ್ನನನ್ನೂ ಮತ್ತು ಇಲಾನಾಡಿಯಲ್ಲಿ ನೀಲವರ್ಣದ ಅನಿರುದ್ಧನನ್ನೂ ತಿಳಿಯುವುದು.

ಚತುರ್ವ್ಯಾಹೃತಿ ವಾಚ್ಯಾಸ್ತೇ ಚತುರ್ನಾಡೀ ನಿಯಾಮಕಾಃ ।
ಮಧ್ಯೇ ನಾರಾಯಣೋ ಧ್ಯೇಯಸ್ತರುಣಾರುಣ ಭಾಸ್ವರಃ ॥೧೬೦॥

ಭೂಃ, ಭುವಃ, ಸ್ವಃ, ಭೂರ್ಭುವಸ್ಸ್ವಃ ಎಂಬ ನಾಲ್ಕು ವ್ಯಾಹೃತಿ ಮಂತ್ರನಿಯಾಮಕರು ಮೇಲೆ ಹೇಳಿದ ಅನಿರುದ್ಧಾದಿ ನಾಲ್ಕು ರೂಪಗಳು; ಮಧ್ಯದಲ್ಲಿ ತರುಣನಾದ ಅರುಣನಂತೆ ಪ್ರಕಾಶಿಸುವ ನಾರಾಯಣನನ್ನು ಧ್ಯಾನಮಾಡುವುದು.

ಏತಾನ್ಯೇವ ಸ್ವರೂಪಾಣಿ ಸೂರ್ಯಮಂಡಲಗಾನ್ಯಪಿ ।
ಪ್ರಾಚ್ಯಾಂ ದ್ವಿಶತ ರಕ್ತಾಂಶು ಸಂಸ್ಥಿತೋ ಮಧುನಾಮಕಃ ॥೧೬೧॥

ಈ ಐದು ಭಗವದ್ರೂಪಗಳು ಸೂರ್ಯಮಂಡಲದಲ್ಲಿಯೂ ಇರುವ ಸ್ವರೂಪಗಳು ; ಪೂರ್ವದಿಕ್ಕಿನಲ್ಲಿ ಇನ್ನೂರು ರಕ್ತ (ಕೆಂಪು) ಕಿರಣಗಳಲ್ಲಿರುವ "ಮಧು" ಎಂಬ

ಋಗ್ವಾಚ್ಯೋ ವಾಸುದೇವೋಗ್ನಿ ದ್ಯುತಿರ್ವಸ್ವಗ್ನ್ಯುಪಾಸಿತಃ ।
ದಕ್ಷ ದ್ವಿಶತ ಗೌರಾಂಶು ಸಂಸ್ಥಿತೋ ಮಧುನಾಮಕಃ ॥೧೬೨॥

ಶುಕ್ಲ ವರ್ಣೋ ಯಜುರ್ವೇದ ವಾಚ್ಯಃ ಸಂಕರ್ಷಣಃ ಸ್ಮೃತಃ ।
ಮಧುವಿದ್ಯೋದಿತೈಃ ಸೇವ್ಯೋರುದ್ರೈರ್ವಾಯು ಪುರಸ್ಸರೈಃ ॥೧೬೩॥

ಋಗ್ವೇದದಿಂದ ಹೇಳಲ್ಪಡುವ, ವಸ್ತುಗಳಲ್ಲಿರುವ ಅಗ್ನಿಯಿಂದ ಉಪಾಸಿತನಾದ ಅಗ್ನಿಯಂತೆ ಪ್ರಕಾಶಿಸುವ ವಾಸುದೇವನಿರುವನು; ಹಾಗೆಯೇ ದಕ್ಷಿಣದಿಕ್ಕಿನಲ್ಲಿ ಇನ್ನೂರು ಗೌರಬಣ್ಣದ ಕಿರಣಗಳಲ್ಲಿ ಮಧುವೆಂಬ ಯಜುರ್ವೇದದಿಂದ ಪ್ರತಿಪಾದಿಸಲ್ಪಡುವ ಶ್ವೇತವರ್ಣದ ಸಂಕರ್ಷಣನಿರುವನು; ಈತನು ಮಧುವಿದ್ಯೆಯಲ್ಲಿ (ಮಂತ್ರಗಳಲ್ಲಿ) ಹೇಳಿರುವ ಕ್ರಮಗಳಿಂದ, ರುದ್ರ, ವಾಯು ಮುಂತಾದ ದೇವತೆಗಳಿಂದ ಉಪಾಸಿಸಲ್ಪಡುವನು.

**ಪ್ರತ್ಯಕ್ಛತ ದ್ವಯಶ್ಯಾಮ ರಶ್ಮಿಸ್ಥ ಶ್ಯಾಮವರ್ಣಕಃ ।**
**ಸಾಮವೇದಾದಿ ಸಂವಾಚ್ಯಃ ಪ್ರದ್ಯುಮ್ನೋ ಮಧುನಾಮಕಃ ॥೧೬೪॥**

ಪಶ್ಚಿಮ ದಿಕ್ಕಿನ ಕರಿಯಬಣ್ಣದ ಇನ್ನೂರು ಕಿರಣಗಳಲ್ಲಿ ಶ್ಯಾಮವರ್ಣದ ಸಾಮವೇದ ಮೊದಲಾದವುಗಳಿಂದ ವಾಚ್ಯನಾದ, ಮಧು ಎಂಬ ಪ್ರದ್ಯುಮ್ನನು ಸಾಮವೇದಾಭಿಮಾನಿಗಳಾದ ಸಾಮವೆಂಬ ಹೆಸರಿನ ಸೂರ್ಯರಿಂದ ಉಪಾಸಿಸಲ್ಪಡುವನು.

**ಸಾಮಾಭಿಮಾನಿಭಿಃ ಸೂರ್ಯೈರುಪಾಸ್ಯಃ ಸಾಮನಾಮಕೈಃ ॥**
**ಉದಗ್ದ್ವಿಶತ ನೀಲಾಂಶು ಸಂಸ್ಥಿತೋ ನೀಲವರ್ಣಕಃ ॥೧೬೫॥**

**ಅಥರ್ವವೇದೇತಿಹಾಸ ಪುರಾಣಪ್ರತಿಪಾದಿತಃ ।**
**ಮಧುನಾಮಾನಿರುದ್ಧಶ್ಚ ಮರುದ್ಭಿಃ ಸೋಮಪೂರ್ವಕೈಃ ॥೧೬೬॥**

ಉತ್ತರ ದಿಕ್ಕಿನ ನೀಲವರ್ಣದ ಇನ್ನೂರು ಕಿರಣಗಳಲ್ಲಿರುವ ಅಥರ್ವವೇದ, ಇತಿಹಾಸ ಮತ್ತು ಪುರಾಣಗಳಿಂದ ಪ್ರತಿಪಾದಿಸಲ್ಪಡುವ ನೀಲಿಬಣ್ಣದ ಮಧು ಎಂಬ ಅನಿರುದ್ಧದೇವನು ಚಂದ್ರ ಮತ್ತು ಮರುದ್ಗಣಗಳಿಂದ ಉಪಾಸಿಸಲ್ಪಡುವನು.

**ಉಪಾಸ್ಯಃ ಸೂರ್ಯಮಧ್ಯಸ್ಥ ಪೀತೋರ್ಧ್ವ ದ್ವಿಶತಾಂಶುಗಃ ।**
**ಅನಂತವೇದ ವೇದ್ಯೋಽಸ ಉಪಾಸ್ಯೋ ಮಧುನಾಮಕಃ ॥೧೬೭॥**

ನಾರಾಯಣಃ ಪ್ರೋದ್ಯದರ್ಕ ದ್ಯುತಿ ರ್ವೇದಾಭಿಮಾನಿಭಿಃ ।
ಬ್ರಹ್ಮವಾಗ್ವಾರುಣೀಶೇಷ ಸೌಪರ್ಣೀ ಗರುಡಾದಿಭಿಃ ॥೧೬೮॥
ಸರ್ವದೋಪಾಸ್ಯತೇ ಸೂರ್ಯೇ ಪಂಚಧಾವಸ್ಥಿತೋ ಹರಿಃ ॥

ಅನಂತ ವೇದವೇದ್ಯನಾದ ಮಧು ಎಂಬ ಉದಯಿಸುತ್ತಲಿರುವ ಸೂರ್ಯನಂತೆ ಪ್ರಕಾಶಿಸುವ ನಾರಾಯಣನು ಸೂರ್ಯನ ಮಧ್ಯದಲ್ಲಿರುವ ಹಳದೀಬಣ್ಣದ ಇನ್ನೂರು ಕಿರಣಗಳಲ್ಲಿ ವೇದಾಭಿಮಾನಿಗಳಾದ, ಬ್ರಹ್ಮ, ವಾಗ್ದೇವಿ (ಸರಸ್ವತಿ), ವಾರುಣೀ, ಸೌಪರ್ಣೀ, ಶೇಷ ಮತ್ತು ಗರುಡ ಮೊದಲಾದವರಿಂದ, ಸೂರ್ಯನಲ್ಲಿ ಹೀಗೆ ಐದು ರೂಪದಿಂದಿರುವ ಶ್ರೀಹರಿಯು ಉಪಾಸಿಸಲ್ಪಡುವನು.

ಪಿಂಗಳಾ ದಕ್ಷಿಣಾನಾಡೀ ಇಲಾ ವಾಮಾ ಪ್ರಚೋದಿತಾ ।
ಪಿಂಗಳಾಂಶಾಃ ಪಂಚಶತ ನಾಡ್ಯೋ ವೈ ದಕ್ಷಿಣಾಯನಃ ॥೧೬೯॥

ಪಿಂಗಳಾನಾಡಿಯು ಬಲಗಡೆಯಲ್ಲಿಯೂ, ಇಲಾನಾಡಿಯು ಎಡಭಾಗದಲ್ಲಿಯೂ ಇರುವುವು; ಈ ಪಿಂಗಳಾನಾಡಿಯಲ್ಲಿ ಐನೂರು ನಾಡಿಗಳು ಕಿರಣಗಳಂತೆ ಇರುವುವು; ಇವು ದಕ್ಷಿಣಾಯನವು.

ಏತಾಶ್ಚ ದಕ್ಷಿಣಾನಾಡ್ಯಃ ತಿರ್ಯಗ್ವಾಮೇ ಪ್ರಸಾರಿತಾಃ ।
ಆತತಾಶ್ಚಾಸು ಸೂರ್ಯಸ್ಯ ದಕ್ಷಿಣಾಯನ ರಶ್ಮಯಃ ॥೧೭೦॥

ಈ ಬಲಗಡೆಯ ನಾಡಿಗಳು (ಪುರುಷರಲ್ಲಿ) ಎಡಭಾಗಕ್ಕೆ ಬಂದಿರುತ್ತವೆ. ಇವುಗಳಲ್ಲಿ ಸೂರ್ಯನ ದಕ್ಷಿಣಾಯನದ ಕಿರಣಗಳು ತುಂಬಿರುವುವು.

ದಕ್ಷಿಣಾಯನ ಮಾರ್ಗೋಽಯಂ ಧೂಮಾದಿರಿತಿ ವಿಶ್ರುತಃ ।
ಪಿತೃಯಾನಂ ತಮೇವಾಹುಃ ಸೃತಿಸ್ಥಾನಂ ವಿಧೀಯತೇ ॥೧೭೧॥

ಧೂಮಾದಿ ಮಾರ್ಗವೆಂದು ಪ್ರಸಿದ್ಧವಾದ ದಕ್ಷಿಣಾಯನದ ಪಿತೃಯಾನವೆಂದು ಹೇಳುವರು; ಈ ಹಾದಿಯಲ್ಲಿ ಹೋದವರು ಮತ್ತೆ ಭೂಮಿಯಲ್ಲಿ ಜನಿಸುವರು.

ಇಲಾಂಶಾಶ್ಚ ಶತಂಪಂಚ ನಾಡ್ಯ ಶ್ಚೈವೋತ್ತರಾಯಣಃ ।
ಉತ್ತರಾಯಣ ನಾಡ್ಯಸ್ತು ತಿರ್ಯಗ್ದಕ್ಷಿಣ ಸಂಸ್ಥಿತಾಃ ॥೧೭೨॥

ತಾಸ್ವಾತತಾಶ್ಚಸೂರ್ಯಸ್ಯ ರಶ್ಮಯ ಶ್ಚೋತ್ತರಾಯಣಃ ।
ಉತ್ತರಾಯಣ ಮಾರ್ಗೋಯಮರ್ಚಿರಾದಿರಿತಿ ಸ್ಮೃತಃ ॥೧೭೩॥
ದೇವಯಾನಂ ಬ್ರಹ್ಮಯಾನಂ ತಮೇ ವಾಹು ರ್ಮನೀಷಿಣಃ ॥

ಇಲಾನಾಡಿಯ ಶಾಖೆಗಳಾದ ಐನೂರು ನಾಡಿಗಳು ಎಡಭಾಗದಿಂದ ಹೊರಟು ಬಲಕ್ಕೆ ಬಂದಿರುವುವು; ಇವು ಉತ್ತರಾಯಣ ನಾಡಿಗಳು; ಇವುಗಳಲ್ಲಿ ಸೂರ್ಯನ ಉತ್ತರಾಯಣ ಕಿರಣಗಳು ಐನೂರು ತುಂಬಿರುವುವು; ಈ ಹಾದಿಯಲ್ಲಿ ಹೋಗುವುದು ಉತ್ತರಾಯಣ ಮಾರ್ಗವು; ಇದನ್ನು ಬ್ರಹ್ಮಲೋಕಕ್ಕೆ ಹೋಗುವ ದೇವಯಾನವೆಂದು ಜ್ಞಾನಿಗಳು ಹೇಳುವರು; ಇದಕ್ಕೆ ಅರ್ಚಿರಾದಿ ಮಾರ್ಗವೆಂದು ಪ್ರಸಿದ್ಧಿಯು.

ಯೇ ಚ ಧೂಮಾದಿ ಮಾರ್ಗಸ್ಥಾಃ ಯಾವದ್ದೇಹಸ್ಥಿತಾಂಶುಭಿಃ ।
ನಿರ್ಯಾಂತಿ ವಾಮಕರ್ಣಾಂತೆ ತಮೋಗಾಃ
ಪಿತೃಯಾನಗಾಃ ॥೧೭೪॥

ಯಾರಾದರೆ ಧೂಮಾದಿ ಮಾರ್ಗದಲ್ಲಿರುವ ದೇಹದಲ್ಲಿನ ನಾಡಿಯ ಶಾಖೆಗಳಿಂದ ಹೊರಟು ಈ ದೇಹವನ್ನು ಬಿಟ್ಟು ಕಿವಿಯ ಮೂಲಕ ಹೋಗುವರೋ, ಅವರು ನರಕಾದಿಗಳನ್ನು ಕುರಿತು ಹೋಗುವ ಪಿತೃಯಾನದವರು ಎಂದು ತಿಳಿಯುವುದು.

ಯೇ ಚಾರ್ಚಿರಾದಿ ಮಾರ್ಗಸ್ಥಾಃ ಮುಕ್ತಿಯೋಗ್ಯಾಶ್ಚಮಾನುಷಾಃ ।
ತೇ ಯಾಂತಿ ದಕ್ಷಿಣಾತ್ಕರ್ಣಾ ದ್ರಶ್ಮಿಭಿರ್ದೇವ ಯಾನಗಾಃ ॥೧೭೫॥

ಮುಕ್ತಿಯೋಗ್ಯರಾದ ಮನುಜರು, ಅರ್ಚಿರಾದಿ ಮಾರ್ಗನಲ್ಲಿದ್ದವರು, ಬಲಗಿವಿಯ ದೆಸೆಯಿಂದ, ಕಿರಣಗಳಿಂದ, ದೇವಯಾನದಲ್ಲಿ ಹೋಗುವರು.

ಯೇತು ಸಾಧನಸಂಪನ್ನಾಃ ಪಕ್ವಾ ಪ್ರಾರಬ್ಧ ಭೋಗಿನಃ ।
ಅನಾದಿಲಿಂಗ ದೇಹಸ್ಯ ಭಂಗಕಾಲ ಉಪಸ್ಥಿತೆ ||೧೭೬||

ಯೋಗಪ್ರಭಾವಾದ್ವಿಷ್ಣ್ವಸ್ಯ ಸ್ವಮನಃ ಪರಮಾತ್ಮನಿ ।
ಪೃಥಿವ್ಯಾದಿಕ್ರಮೇಣೈವ ಹ್ಯವ್ಯಕ್ತಾಂತಂ ನಿಯೋಜ್ಯ ಚ ||೧೭೭||

ತತ್ವಾಭಿಮಾನಿನೋ ದೇವಾನ್ ಕ್ರಮಾತ್ಸಂ ಯೋಜ್ಯ ತೈಃ ಸಹ ।
ಸ್ವಾಂತಸ್ಥ ಹರಿಣಾಸಾಕಂ ಜೀವಾಸ್ತೆ ಬ್ರಹ್ಮಯಾನಗಾಃ ||೧೭೮||

ಮುಕ್ತಿಗೆ ಹೋಗಲು ತಮ್ಮ ಸಾಧನಪೂರ್ಣರಾದವರು ಮತ್ತು ಪ್ರಾರಬ್ಧ ಕರ್ಮವನ್ನು ಅನುಭವಿಸಿ ಪಕ್ವಸ್ಥಿತಿಗೆ ಬಂದಿರುವವರು ಅನಾದಿಯಾದ ಲಿಂಗ ದೇಹದ ಬಿಡುಗಡೆಯ ಕಾಲವು ಸಿದ್ಧವಾಗಲು ಶ್ರೀಹರಿಯ ಉತ್ತಮ ಅನುಗ್ರಹದಿಂದ ದೊರೆತ ಯೋಗದ ಮಹಿಮೆಯ ದೆಸೆಯಿಂದ ತಮ್ಮ ಮನಸ್ಸನ್ನು ಶ್ರೀಹರಿಯಲ್ಲಿ, ಪೃಥ್ವೀ, ಅಪ್ಪು ಮೊದಲುಮಾಡಿ ಅವ್ಯಕ್ತತತ್ವದವರಿವಿಗೆ ಒಂದರೊಳಗೊಂದರ ಪ್ರವೇಶವನ್ನು ತಿಳಿದು, ತತ್ವಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ತಾರತಮ್ಯಕ್ರಮದಿಂದ ಒಬ್ಬರೊಳಗೆ ಮತ್ತೊಬ್ಬರ ಪ್ರವೇಶವನ್ನು ತಿಳಿದು ಅವರೊಡನೆ ತಮ್ಮ ಹೃದಯದಲ್ಲಿರುವ ಶ್ರೀಹರಿಯಿಂದ ಸಹಿತರಾಗಿ ಆ ಜೀವರು ಬ್ರಹ್ಮಯಾನದಲ್ಲಿ ಹೋಗುವರು.

ಸುಷುಮ್ನಾ ಮಾರ್ಗತೋ ಬ್ರಹ್ಮರಂಧ್ರಾ ದುತ್ಕ್ರಮ್ಯ ವಾಯುನಾ ।
ಸಾರ್ಧಂ ಬ್ರಹ್ಮಪದಂ ಪ್ರಾಪ್ಯ ತೇನ ಯಾಂತಿ ಪರಂ ಪದಮ್ ||೧೭೯||

ಏತನ್ಮಾರ್ಗತ್ರಯಂ ಜ್ಞಾತ್ವಾ ಸಮ್ಯಕ್ ಮುಕ್ತಿಪಥಂ ವಿಶೇತ್ ||

ಸುಷುಮ್ನಾನಾಡಿಯಿಂದ ಹೊರಟು ಬ್ರಹ್ಮರಂಧ್ರದ ದೆಸೆಯಿಂದ ವಾಯುದೇವರಿಂದ ಸಹಿತವಾಗಿ ಹೊರಹೊರಟು ಬ್ರಹ್ಮಲೋಕವನ್ನು ಕುರಿತು ಹೋಗಿ ಆತನಿಂದ ಸಹಿತರಾಗಿ ಪರಮಪದವಿ ಎಂಬ ಮುಕ್ತಸ್ಥಾನವನ್ನು ಹೊಂದುವರು; ಹೀಗೆ ಅರ್ಚಿರಾದಿ, ಧೂಮಾದಿ ಮತ್ತು ಬ್ರಹ್ಮಮಾರ್ಗ

ವೆಂಬ ಮೂರು ಹಾದಿಗಳನ್ನು ಚೆನ್ನಾಗಿ ತಿಳಿದುಕೊಂಡು ಅವುಗಳೊಳಗೆ ಮುಕ್ತಿಯ ಹಾದಿಯನ್ನು ಸಜ್ಜನರು ಆಶ್ರಯಿಸಬೇಕು.

**ದೇವಾನಾಂ ಲಯಮಾರ್ಗೌದ್ವೌ ಪ್ರೋಕ್ತೌ ಶೇಷಗಾರುಡೌ||೧೪೦||**

ದೇವತೆಗಳು ಮುಕ್ತಿಗಾಗಿ ಶ್ರೀಹರಿಯನ್ನು ಕುರಿತು ಹೋಗಲು ಶೇಷ ಮತ್ತು ಗರುಡ ಎಂಬ ಎರಡು ಮಾರ್ಗಗಳಿರುವುವು.

**ಗಂಧರ್ವ ಪ್ರಮುಖಾಃ ಸರ್ವೇ ಯೇ ಚ ದೇವಾನುಗಾಶ್ಚ ತೇ |**
**ಪ್ರವಿಶಂತಿ ಕುಬೇರಂ ವೈ ಕುಬೇರೋಽಪ್ಪತಿನಾ ಸಹ ||೧೪೧||**

**ಸೋಮಂ ವಿಶತಿ ವೈ ಸೋಮೋ ವಿಶ್ವಕ್ಸೇನಾದಿಕೈಃ ಸಹ |**
**ಪಾರ್ಷದೈರನಿರುದ್ಧಂ ಚ ಹ್ಯನಿರುದ್ಧೋಽಪಿ ಯೋಗಿಭಿಃ ||೧೪೨||**

**ಸನಕಾದ್ಯೈಸ್ತತಃ ಕಾಮಂ ಕಾಮದೇವಸ್ತು ವಾರುಣೀಮ್ |**
**ವಾರುಣೀ ಸ್ವಪತಿಂ ಶೇಷಂ ಶೇಷದೇವಃ ಸರಸ್ವತೀಮ್ ||೧೪೩||**

**ಪ್ರವಿಶ್ಯತ್ಯಬ್ಜಜಂ ವಾಣೀ ಬ್ರಹ್ಮಾ ತೇಜೋಽಭಿಧಾಂ ಶ್ರಿಯಮ್ |**
**ಶ್ರೀದೇವೀ ವಿಷ್ಣುಸಾಮೀಪ್ಯ ಲಕ್ಷಣಂ ಸಂಗಮೇಷ್ಯತಿ ||೧೪೪||**

**ಶೇಷಮಾರ್ಗೋಯ ಮುದ್ದಿಷ್ಟಃ.................||**

ಗಂಧರ್ವರೇ ಮೊದಲಾದ ಸಕಲ ದೇವತಾನುಚರರು ಕುಬೇರನನ್ನು ಹೊಂದುವರು ; ಆತನು ಇವರಿಂದ ಸಹಿತನಾಗಿ ಚಂದ್ರದೇವನನ್ನೂ ಪ್ರವೇಶಿಸುವರು ; ಆತನು ವಿಶ್ವಕ್ಸೇನನೇ ಮೊದಲಾದ ಶ್ರೀವಿಷ್ಣುವಿನ ಸಾಕ್ಷಾತ್ಸೇವಕರಿಂದ ಸಮೇತನಾಗಿ ಅನಿರುದ್ಧನೆಂಬಾ (ಕಾಮನಪುತ್ರ, ಶಂಖಾಭಿಮಾನಿ ದೇವತಾ) ತನನ್ನೂ, ಆತನು ಸನಕ, ಸನಂದನಾದಿ ಯೋಗಿಗಳಿಂದ ಸಹಿತನಾಗಿ ಮನ್ಮಥನನ್ನೂ ಪ್ರವೇಶಿಸುವನು: ಆತನು ವಾರುಣೀದೇವಿಯನ್ನೂ ಆಕೆಯು ತನ್ನ ಪತಿಯಾದ ಶೇಷದೇವರನ್ನೂ, ಆತನು ಸರಸ್ವತೀದೇವಿಯುವ

ರನ್ನೂ, ಆಕೆಯು ತನ್ನ ಪತಿಯಾದ ಚತುರ್ಮುಖ ಬ್ರಹ್ಮದೇವನನ್ನೂ, ಆತನು ತೇಜಶ್ಯಬ್ದವಾಚ್ಯಳಾದ ಶ್ರೀ ಲಕ್ಷ್ಮೀದೇವಿಯನ್ನೂ ಆಕೆಯು ಶ್ರೀ ವಿಷ್ಣು ಸಾಮಿಪ್ಯ ಲಕ್ಷಣವಾದ ಸಂಗವನ್ನು ಹೊಂದುವಳು; ಇದು ಶೇಷ ಮಾರ್ಗವು.

......................ತದತೋ ಗಾರುಡ ಉಚ್ಯತೆ ||

ವರ್ಣಾಶ್ರಮಾಚರಾ ರತಾಯೆ ಪ್ರೋಕ್ತಾ
ಮಾನುಷೋತ್ತಮಾಃ ||೧೮೫||

ನಿರಋತಿಃ ಪಿತರಃ ಸರ್ವೆ ತಥಾ ವೈವಸ್ವತಾದಯಃ |
ಮನವಶ್ಚ ಪೃಥ್ವಾದ್ಯಾಽ ಯೇ ಪ್ರೋಕ್ತಾ ರಾಜಸತ್ತಮಾಃ ||೧೮೬||

ಧರ್ಮಂ ವಿಶಂತಿ ತೇ ಸರ್ವೆ ಧರ್ಮಃ ಸ್ವಾಯಂಭುವಂ ಮನುಮ್ |
ಸ್ವಾಯಂಭುವ ಮನುಃ ಶಕ್ರಂ ಸಮಾವಿಶತಿ ವೈ ತಥಾ ||೧೮೭||

ಶಕ್ರಮೇವ ವಿಶಂತ್ಯೇತೆ ಪ್ರವಹಾದ್ಯಾ ಮರುದ್ಗಣಾಃ |
ವಿನಾಯಕಾ ಸಾಧ್ಯಗಣಾಶ್ಚಾಕಾಶಂ ಪ್ರವಿಶಂತಿ ತೆ ||೧೮೮||

ಮೃತ್ಯವೋ ಋಭವಃ ಸರ್ವೆ ವಿಶಂತಿ ಪೃಥಿವೀಂ ಕ್ರಮಾತ್ |
ಅಗ್ನಿಪುತ್ರಾಶ್ಚ ಸರ್ವೇಽಪಿ ದೇವಾಶ್ಚೋಕ್ತೇತರೇ ಚ ಯೆ ||೧೮೯||

ತೇ ಸರ್ವೆ ಪ್ರವಿಶಂತ್ಯಗ್ನಿಮಗ್ನಿ ರಾದಿತ್ಯಮಾವಿಶೇತ್ |
ಸಚಾಕಾಶಃ ಸಾ ಚ ಪೃಥ್ವೀ ಸ ಚಾ ದಿತ್ಯೋ ಗುರುಂ ವಿಶೇತ್ ||೧೯೦||

ಗುರುರ್ವಿಶತಿ ವೈ ಶಕ್ರಮಪಿ ದೇವರ್ಷಿ ರ್ನಾರದಃ |
ಭೃಗು ರ್ವಿಧಿ ಸುತಾಃ ಸರ್ವೆ ವಸಿಷ್ಠಾತ್ರಿ ಪುರೋಗಮಾಃ ||೧೯೧||

ದಕ್ಷಂ ವಿಶತಿ ದಕ್ಷೋಽಪಿ ಶಕ್ರಂ ಪ್ರವಿಶತಿ ಪ್ರಭುಮ್ |
ಶಕ್ರೋಽವಿಶತಿ ಸೌಪರ್ಣೀಂ ಸೌಪರ್ಣೀ ಸ್ವಪತಿಂ ಖಗಮ್ ||೧೯೨||

ಗರುತ಼್್ಮಾನ್ ಪ್ರವಿಶೇದ್ವಾಣೀಂ ವಾಣೀ ಬ್ರಹ್ಮಾಣಮೀಶ್ವರಮ್ ।
ಬ್ರಹ್ಮಾ ತೇಜೋಭಿಧಾಂ ಲಕ್ಷ್ಮೀಂ ಸಮಾಯಾತಿ
ಸ್ವಮಾತರಮ್ ॥೧೯॥

ರಮಾ ಯಾತ್ಯತಿಸಾಮೀಪ್ಯಂ ವಿಷ್ಣೋರ್ನಿತ್ಯಾನಪಾಯಿನೀ ।
ಇತ್ಯುಕ್ತೋ ಗಾರುಡೋ ಮಾರ್ಗೋ ಮುಕ್ತ್ಯರ್ಥಂ ಚ
ದಿವೌಕಸಾಮ್ ॥೧೪॥

ತದನಂತರ ಗಾರುಡಮಾರ್ಗವು ಹೇಳಲ್ಪಡುವುದು; ವರ್ಣಾಶ್ರಮ ಧರ್ಮನಿರತರಾದ ಮುಕ್ತಿಯೋಗ್ಯರಾದ ಮಾನುಷೋತ್ತಮರು, ನಿರಋತಿಯು ಪಿತೃಗಳು, ವೈವಸ್ವತ (ಶ್ರಾದ್ಧದೇವ)ನೇ ಮೊದಲಾದ ೧೧ ಮನುಗಳು, ಪೃಥು, ಜನಕ, ಭರತ ಮೊದಲಾದ ಶ್ರೇಷ್ಠರಾಜರು ಧರ್ಮನೆಂಬ ಪ್ರಜಾಪತಿ ಯನ್ನು ಪ್ರವೇಶಿಸುವರು; ಈತನು ಸ್ವಾಯಂಭುವ ಮನುವನ್ನೂ, ಈತನು ಪುರಂದರನೆಂಬ ದೇವೇಂದ್ರನನ್ನೂ ಪ್ರವೇಶಿಸುವರು; ಪ್ರವಹ, ವಿವಹ ಮೊದ ಲಾದ ನಲ್ವತ್ತೊಂಭತ್ತು ಮರುದ್ಗಣಗಳು ದೇವೇಂದ್ರನಲ್ಲಿಯೇ ಪ್ರವೇಶಿಸು ತ್ತಾರೆ; ವಿನಾಯಕನು, ಸಾಧ್ಯಗಣದವರು ಆಕಾಶವನ್ನು ಪ್ರವೇಶಿಸುವರು; ಮೃತ್ಯುದೇವತೆಗಳು ಮತ್ತು ಋಭುದೇವತೆಗಳು ಸಕಲರೂ ಕ್ರಮದಿಂದ ಪೃಥ್ವಿಯನ್ನು ಪ್ರವೇಶಿಸುವರು; ಸರ್ವಅಗ್ನಿತನಯರೂ, ಇಲ್ಲಿ ಹೇಳದಿರುವ ದೇವತೆಗಳೂ, ಅಗ್ನಿಯನ್ನು ಪ್ರವೇಶಿಸುವರು; ಅಗ್ನಿಯು ಸೂರ್ಯನಲ್ಲಿ ಪ್ರವೇಶಿಸುತ್ತಾನೆ; ಆಕಾಶ, ಪೃಥ್ವೀ ಮತ್ತು ಸೂರ್ಯ ತಮ್ಮವರಿಂದ ಸಹಿತ ವಾಗಿ ಬೃಹಸ್ಪತಿಯನ್ನು ಪ್ರವೇಶಿಸುವರು; ಆತನು ದೇವೇಂದ್ರನನ್ನು ಪ್ರವೇಶಿಸುವನು; ಆ ಇಂದ್ರನು ಸೌಪರ್ಣೀದೇವಿಯನ್ನೂ ಆಕೆಯು ತನ್ನ ಪತಿಯಾದ ಗರುಡದೇವನನ್ನೂ, ಆತನು ವಾಣೀ ಎಂಬ ಸರಸ್ವತೀ ದೇವಿ ಯನ್ನೂ, ಆಕೆಯು ತನ್ನ ಪತಿಯಾದ ಚತುರ್ಮುಖ ಬ್ರಹ್ಮನನ್ನೂ ಪ್ರವೇಶಿಸು ವಳು; ಇವರೆಲ್ಲರೊಡನೆ ಆ ಬ್ರಹ್ಮದೇವನು ತನ್ನ ತಾಯಿಯಾದ ತೇಜೋ ನಾಮಕಳಾದ ಲಕ್ಷ್ಮೀದೇವಿಯನ್ನೂ ಪ್ರವೇಶಿಸುವನು; ಯಾವಾಗಲೂ ಪತಿ ಯನ್ನು ಬಿಟ್ಟು ಅಗಲದಿರುವ ಆ ರಮಾದೇವಿಯು ಶ್ರೀವಿಷ್ಣುವಿನ ಅತಿ

ಸಾಮಿಪ್ಯವನ್ನು ಹೊಂದುವಳು. ಇದೇ ಗಾರುಡ ಮಾರ್ಗವು. ಇದನ್ನು ದೇವತೆಗಳು ಮುಕ್ತಿಗೆ ಹೋಗುವ ಹಾದಿಯೆಂದು ತಿಳಿಯುವುದು.

**ನೈತನ್ಮಾರ್ಗ ದ್ವಯಜ್ಞಾನೀ ಯಾಮಿನೀಂ ಪದವೀಂ**
**ವ್ರಜೇತ್ ||೧೯೫||**

ಈ ಶೇಷ ಗರುಡಮಾರ್ಗಗಳೆರಡನ್ನೂ ತಿಳಿದವರು ನರಕ ದುಃಖಾತ್ಮಕ ವಾದ ಯಮಲೋಕಕ್ಕೆ ಹೋಗುವುದಿಲ್ಲ.

ಈ ಎರಡು ಮಾರ್ಗಗಳನ್ನೂ ಕಡೆಯಲ್ಲಿ ತೋರಿಸಿರುವ ಪಟದಿಂದ ಚೆನ್ನಾಗಿ ತಿಳಿಯಬಹುದು.

ಅವ:—ನಾಡಿಗಳ ವಿಷಯವನ್ನು ಹೇಳುವರು :—

**ಇತಃ, ಪರಂ ಸುಷುಮ್ನಾದಿ ನಾಡೀ ದಕ್ಷಿಣಪಾರ್ಶ್ವಕೇ |**
**ಸ ಷಟ್ತ್ರಿಂಶತಿ ಸಾಹಸ್ರ ನಾಡ್ಯಃ ಸಂತಿ ಹಿ ತಾಸು ಚ ||೧೯೬||**

ಇಲ್ಲಿಂದ ಮುಂದೆ ಸುಷುಮ್ನಾದಿ ನಾಡಿಗಳ ಬಲಭಾಗದಲ್ಲಿ (೩೬,೦೦೦) ಮೂವತ್ತಾರು ಸಾವಿರ ಶಾಖಾನಾಡಿಗಳಿರುವುವು.

**ಷಟ್ತ್ರಿಂಶ ತ್ಸಹಸ್ರಾಣಿ ಪುಂರೂಪಾಣಿ ವಿಚಿಂತಯೇತ್ |**
**ಏತಾನಿ ಪುರುಷಾಯುಷ್ಯ ದಿನಾಹ್ನಾಂ ದೈವತಾನಿ ಚ ||೧೯೭||**

ಮೂವತ್ತಾರು ಸಾವಿರ ಪರಮಾತ್ಮನ ಪುರುಷರೂಪಗಳನ್ನು ಇವುಗಳಲ್ಲಿ ತಿಳಿಯುವುದು; ಈ ರೂಪಗಳು ಜೀವರ ಆಯುಷ್ಯಕಾಲವಾದ ೧೦೦ (ನೂರು) ವರ್ಷಗಳಿಗೆ ಆಗುವ ಹಗಲುಗಳಿಗೆ ನಿಯಾಮಕವಾದವು.

**ಸುಷುಮ್ನಾ ವಾಮಪಾರ್ಶ್ವೇಽಪಿ ಷಟ್ತ್ರಿಂಶತಿ ಸಹಸ್ರಕಾಃ |**
**ನಾಡ್ಯಃ ಸಂತ್ಯತ್ರ ತಾವಂತಿ ಸ್ತ್ರೀರೂಪಾಣಿ ವಿಚಿಂತಯೇತ್ ||೧೯೮||**

ಸುಷುಮ್ನಾ ನಾಡಿಯ ಎಡಭಾಗದಲ್ಲಿಯೂ ಮೂವತ್ತಾರು ಸಾವಿರ ಸ್ತ್ರೀನಾಡಿಗಳಿರುವುವು; ಅವುಗಳಲ್ಲಿ ಅಷ್ಟೇ ಪರಮಾತ್ಮನ ಸ್ತ್ರೀರೂಪಗಳಿವೆ.

**ಏತಾನಿ ಮಾನುಷಾದೀನಾಂ ರಾತ್ರ್ಯಾಯುರ್ದೇವತಾನಿ ಚ ।**
**ಏತಾನಿ ಪುಂಸ್ತ್ರೀರೂಪಾಣಿ ಬೃಹತೀಸ್ತುತಿಗಾನಿ ಚ ॥೧೯೯॥**

ಇವು ಮನುಜಾದಿಗಳ ಆಯುಷ್ಯಕಾಲದ ರಾತ್ರಿಗಳಿಗೆ ನಿಯಾಮಕ ವಾದ ರೂಪಗಳು; ಈ ಪುರುಷ ಮತ್ತು ಸ್ತ್ರೀರೂಪಗಳು ಬೃಹತೀ ಸ್ತುತಿ ಯಲ್ಲಿ ಹೇಳಲ್ಪಟ್ಟಿರುವುವು.

**ಬೃಹತೀ ಸಹಸ್ರಾಖ್ಯ ಶ್ರುತೌ ಸ್ವರವ್ಯಂಜನ ಭೇದತಃ ।**
**ದ್ವಾಸಪ್ತತಿ ಸಹಸ್ರಾಣಿ ವರ್ಣಾನ್ಯೇವ ಭವಂತಿ ಹಿ ॥೨೦೦॥**

ಬೃಹತೀ ಛಂದಸಾತ್ಮಕವಾದ ಸಾವಿರ ಋಕ್ಕುಗಳುಳ್ಳ ಭಾಗವಿಶೇಷಕ್ಕೆ ಬೃಹತೀ ಸಹಸ್ರವೆಂದು ಪ್ರಸಿದ್ಧಿಯು; ಒಂದೊಂದು ಋಕ್ಕಿನಲ್ಲಿ ಮೂವ ತ್ತಾರು ಅಕ್ಷರಗಳು ಸ್ವರ ಮತ್ತು ವ್ಯಂಜನ ಮಿಶ್ರವಾಗಿರುವುವು; ಈ ಗಣನೆ ಯಂತೆ (36 ಸ್ವರಗಳು + 36 ವ್ಯಂಜನಗಳು) 72 (ಎಪ್ಪತ್ತೆರಡು) ಒಂದೊಂದು ಋಕ್ಕಿನಲ್ಲಿಯೇ ಆಗುವುವು; ಹೀಗೆ– ಒಂದು ಸಾವಿರ; ಒಟ್ಟು ಎಪ್ಪತ್ತೆರಡು ಸಾವಿರವಾದವು.

**ಸ್ವರಾರ್ಣ ಪ್ರತಿಪಾದ್ಯಾನಿ ಪುಂರೂಪಾಣಿ ರಮಾಪತೇಃ ।**
**ಷಟ್ತ್ರಿಂಶತಿ ಸಹಸ್ರಾಣಿ ವ್ಯಂಜನಾರ್ಣೋದಿತಾನಿ ಚ ॥೨೦೧॥**

**ಷಟ್ತ್ರಿಂಶತಿ ಸಹಸ್ರಾಣಿ ಸ್ತ್ರೀರೂಪಾಣಿ ವಿಚಿಂತಯೇತ್ ।**
**ಜ್ಞಾತ್ವೈತಾನಿ ನರೋಭಕ್ತ್ಯಾ ಪೂರ್ಣಾಯುಷ್ಯತ್ವ ಮೇಷ್ಯತಿ ॥೨೦೨॥**

ಸ್ವರಗಳಿಂದ ಪ್ರತಿಪಾದಿತವಾದ ಲಕ್ಷ್ಮೀಪತಿಯಾದ ನಾರಾಯಣನ ಮೂವತ್ತಾರು ಸಾವಿರ ಪುರುಷ ರೂಪಗಳನ್ನು ಮತ್ತು ವ್ಯಂಜನಾಕ್ಷರ ಪ್ರತಿ

ಪಾದ್ಯವಾದ ಮೂವತ್ತಾರು ಸಾವಿರ ಸ್ತ್ರೀರೂಪಗಳನ್ನೂ ತಿಳಿಯುವುದು; ಈ ರೂಪಗಳನ್ನು ಭಕ್ತಿಯಿಂದ ತಿಳಿದವನು ಪೂರ್ಣಾಯುಷ್ಯವುಳ್ಳವನಾಗುವನು.

ವಿಹಿತಾ ಮೂರ್ತಯಶ್ಚಿತ್ರಾ ಯತ್ರನಾಡೀಷು ವೈ ಹರೇಃ।
ಹಿತಾಃ ನಾಡ್ಯಃ ಸಮುದ್ದಿಷ್ಟಾ ಸ್ತನ್ನಿವಿಷ್ಟೋ ರಮಾಪತಿಃ ॥೨೦೩॥

ಈ ನಾಡಿಗಳಲ್ಲಿ ಶ್ರೀಹರಿಯ ವಿಚಿತ್ರವಾದ ರೂಪಗಳಿರುವುವು; ಆ ನಾಡಿಗಳು ಹಿತವಾಗಿರುವುವು; ಮತ್ತು ಅವುಗಳಲ್ಲೆಲ್ಲ ಶ್ರೀಲಕ್ಷ್ಮೀಪತಿಯಾದ ನಾರಾಯಣನೇ ಇರುವನು.

ಇಂದುನಾಮಾ ಸರ್ವನಾಡೀ ಸಾರಾನ್ಭುಂಕ್ತೇಽಖಿಲಾ ನ್ವಿಭುಃ।
ಏತನ್ನಾಮ ಸ್ವರೂಪಾಣಿ ನಾವಗನ್ತುಂಸ್ಯ ಶಕ್ಯತಃ ॥೨೦೪॥

ಇಂದು ಎಂಬ ನಾಮದಿಂದ ಶ್ರೀನಾರಾಯಣನು ಈ ನಾಡಿಗಳ ಸಕಲ ಸಾರವನ್ನು ಅನುಭವಿಸುವವನು; ಅಶಕ್ಯವಾದುದರಿಂದ ಈ ರೂಪಗಳ ನಾಮಗಳನ್ನು ಮತ್ತು ಸ್ವರೂಪ ಲಕ್ಷಣಗಳನ್ನೂ ತಿಳಿಯಲಾಗುವುದಿಲ್ಲ.

ಅವ:—ಈಗ ಮಾನಸಿಕ ಪೂಜಾವಿಧಿಯನ್ನು ಹೇಳುವರು:—

ಹೃದಯಾಖ್ಯಂ ಪರಂಬ್ರಹ್ಮಪುರಂ ದ್ವಾರವಿರಾಜಿತಮ್।
ತತ್ರಾಗ್ದ್ವಾರಾಣಿ ಚ ತ್ರೀಣಿ ಚಿಂತಯೇತ್ಪ್ರಥಮೇ
ಶ್ರಿಯಮ್ ॥೨೦೫॥

ಪ್ರತಿಯೊಬ್ಬರ ಹೃದಯವು ಬಾಗಿಲುಗಳಿಂದ ಪ್ರಕಾಶಮಾನವಾದ ಪರಬ್ರಹ್ಮನ ಪಟ್ಟಣವು; ಅಥವಾ ಆತನ ಮನೆಯು; ಅದರ ಪೂರ್ವದಿಕ್ಕಿನಲ್ಲಿ ಮೂರು ಬಾಗಿಲುಗಳಿರುವುವು; ಮೊದಲನೆಯ ಬಾಗಿಲಿನಲ್ಲಿ ಶ್ರೀದೇವಿ ಇರುವಳು.

ದ್ವಿತೀಯೇ ಚಿಂತಯೇತ್ಪ್ರಾಣಂ ಚಕ್ಷುರಾದಿತ್ಯನಾಮಕಮ್ ।
ದ್ಯುನಾಮಿಕಾಂ ಭಾರತೀಂ ಚ ತೃತೀಯೇ ಚ ಜಯಾದಿಕೌ ॥೨೦೬॥

ಎರಡನೆಯದರಲ್ಲಿ ಆದಿತ್ಯನೆಂಬ ನೇತ್ರಪ್ರಾಣನನ್ನೂ ದ್ಯು ಎಂಬ ಭಾರತೀದೇವಿಯನ್ನೂ ಮೂರನೆಯದರಲ್ಲಿ ಜಯವಿಜಯರನ್ನೂ ತಿಳಿಯುವುದು.

ದಕ್ಷದ್ವಾರಾಣ್ಯಪಿ ತ್ರೀಣಿ ತತ್ರಾದ್ಯೇ ಚಿಂತಯೇಚ್ಛ್ರಿಯಮ್ ।
ದ್ವಿತೀಯೇ ಚಿಂತಯೇದ್ವ್ಯಾನಂ ಸೋಮಂ ಶ್ರೋತ್ರಾಭಿಧಂ ತಥಾ ॥೨೦೭॥

ದಕ್ಷಿಣದಲ್ಲಿಯೂ ಮೂರು ಬಾಗಿಲುಗಳು; ಪ್ರಥಮ ದ್ವಾರದಲ್ಲಿ ಶ್ರೀದೇವಿಯೂ ಎರಡನೆಯದರಲ್ಲಿ ವ್ಯಾನನಾಮಕ ವಾಯುವು ಶ್ರೋತ್ರೇಂದ್ರಿಯ ತನ್ನಾಮಕನಾದ ಚಂದ್ರನನ್ನೂ ತಿಳಿಯುವುದು.

ದಿಙ್ನಾಮಿಕಾಂ ಭಾರತೀಂ ಚ ವಾಮಪಾರ್ಶ್ವೇ ವಿಚಿಂತಯೇತ್ ।
ತೃತೀಯೇ ದ್ವಾರಿ ವಿಜ್ಞೇಯೌ ಬಲಪ್ರಬಲ ನಾಮಕೌ ॥೨೦೮॥

ಎಡಭಾಗದಲ್ಲಿ ದಿಙ್ ಎಂಬ ಭಾರತೀದೇವಿಯನ್ನೂ ಮೂರನೇ ಬಾಗಿಲಿನಲ್ಲಿ ಬಲ ಮತ್ತು ಪ್ರಬಲರನ್ನೂ ತಿಳಿಯುವುದು.

ಪ್ರತ್ಯಗ್ದ್ವಾರಾಣಿ ಚ ತ್ರೀಣಿ ಶ್ರಿಯಮಾದ್ಯೇ ವಿಚಿಂತಯೇತ್ ।
ದ್ವಿತೀಯೇಗ್ನಿಂ ವಾಗಪಾನ ನಾಮಕಂ ಚಿಂತಯೇತ್ತತಃ ॥೨೦೯॥

ಪಶ್ಚಿಮದಲ್ಲಿಯೂ ಮೂರು ಬಾಗಿಲುಗಳು; ಪ್ರಥಮ ದ್ವಾರದಲ್ಲಿ ಶ್ರೀದೇವಿಯನ್ನೂ ಎರಡನೆಯದರಲ್ಲಿ ಅಗ್ನಿ, ವಾಕ್ ಅಪಾನನೆಂಬ ವಾಯುವನ್ನೂ ತಿಳಿಯುವುದು.

ಪೃಥ್ವೀನಾಮ್ನೀಂ ಭಾರತೀಂ ಚ ತೃತೀಯೇ ಕುಮುದಾದಿಕೌ ।
ಉದಗ್ದ್ವಾರಾಣಿ ಚ ತ್ರೀಣಿ ಪ್ರಥಮೇ ಚ ಶ್ರಿಯಂ ಸ್ಮರೇತ್ ॥೨೧೦॥

ಪೃಥ್ವೀ ಎಂಬ ಭಾರತೀದೇವಿಯನ್ನೂ, ಮೂರನೆಯ ಬಾಗಿಲಿನಲ್ಲಿ ಕುಮುದ ಮತ್ತು ಕುಮುದೇಕ್ಷಣರನ್ನೂ ತಿಳಿಯುವುದು; ಉತ್ತರದಲ್ಲಿಯೂ ಮೂರು ಬಾಗಿಲುಗಳು; ಪ್ರಥಮ ದ್ವಾರದಲ್ಲಿ ಶ್ರೀದೇವಿಯನ್ನು ಸ್ಮರಿಸುವುದು.

ಇಂದ್ರಂ ಮನಃ ಸಮಾನಾಖ್ಯಂ ದ್ವಿತೀಯೇ ದ್ವಾರಿ ಚಿಂತಯೇತ್।
ವಿದ್ಯುನ್ನಾಮ್ನೀಂ ಭಾರತೀಂ ಚ ತೃತೀಯೇ ನಂದ
ಸುನಂದನೌ ||೨೧೧||

ಇಂದ್ರನನ್ನೂ, ಮನಸ್ಸು, ಸಮಾನನೆಂಬ ವಾಯು ಮತ್ತು 'ವಿದ್ಯುತ್' ಎಂಬ ಭಾರತೀದೇವಿಯನ್ನೂ ಎರಡನೆಯ ಬಾಗಿಲಿನಲ್ಲಿಯೂ, ಮೂರನೆಯದರಲ್ಲಿ ನಂದ, ಸುನಂದರೆಂಬ ದ್ವಾರಪಾಲಕರನ್ನೂ ಭಾವಿಸುವುದು.

ಊರ್ಧ್ವದೇಶೇ ದ್ವಾರಮೇಕಂ ತಸ್ಮಿನ್ನಾಕಾಶ ನಾಮಿಕಾಮ್ ।
ರಮಾಮುದಾನ ವಾಯುಂಚ ವಾಙ್ನಾಮ್ನೀಂಚ
ಭಾರತೀಮ್ ||೨೧೨||
ಏವಂ ಸಂಚಿಂತಯೇದ್ವಿದ್ವಾನ್ ದ್ವಾರೇಷೂಕ್ತ ಪ್ರಕಾರತಃ ।
ಏವಮೇವ ವಿಚಿಂತ್ಯಾಶ್ಚ ದ್ವಾರಪಾಲಾಃ ತ್ರಿಧಾಮಸು ||೨೧೩||

ಮೇಲ್ಭಾಗದಲ್ಲಿ ಒಂದೇ ದ್ವಾರವಿರುವುದು; ಅಲ್ಲಿ ಆಕಾಶವೆಂಬ ರಮಾದೇವಿಯನ್ನೂ, ಉದಾನವಾಯುವನ್ನೂ ಮತ್ತು 'ವಾಕ್' ಎಂಬ ಭಾರತೀದೇವಿಯನ್ನೂ ತಿಳಿಯುವುದು; ಜ್ಞಾನಿಯು ಹೇಳಿದ ಕ್ರಮದಿಂದ, ಬಾಗಿಲುಗಳಲ್ಲಿ ದ್ವಾರಪಾಲಕರನ್ನು ತಿಳಿಯುವುದು. ಇದರಂತೆಯೇ ಅನಂತಾಸನ, ಶ್ವೇತದ್ವೀಪ, ಮತ್ತು ವೈಕುಂಠ ಎಂಬ ಮೂರು ಸ್ಥಳಗಳಲ್ಲಿಯೂ (ಹೃದಯ, ಕಂಠ ಮತ್ತು ಶಿರಸ್ಸು) ದ್ವಾರಪಾಲಕರನ್ನು ತಿಳಿಯುವುದು; ಮತ್ತು ಈ ಮೂರು ಲೋಕಗಳಲ್ಲಿಯೂ ಇರುವ ಶ್ರೀ, ಭೂ ಮತ್ತು ದುರ್ಗಾಭಾಗಗಳಲ್ಲಿಯೂ ತಿಳಿಯುವುದು.

**ಏತಾದೃಶಪುರೀ ಮಧ್ಯೇ ಪರಂ ಬ್ರಹ್ಮೋಪಬೃಂಹಿತಮ್ ।**
**ಸುಷುಮ್ನಾಖ್ಯ ಮಹಾರಾಜ ರಮ್ಯ ಸೌಧಾಂತರ ಸ್ಥಿತಮ್ ॥೨೧೪॥**

ಇಂತಹ ನಗರದ ಮಧ್ಯದಲ್ಲಿ ಪರಬ್ರಹ್ಮನಿಂದ ವಾಸಿಸಲ್ಪಡುವ ಸುಷುಮ್ನೆ ಎಂಬ ಮನೋಹರವಾದ ರಾಜನ ಉಪ್ಪರಿಗೆಯ ಮಧ್ಯದಲ್ಲಿರುವ ;

**ದಹರಾಖ್ಯಾತ್ಮ ಹೃತ್ಪದ್ಮ ವಿಲಸತ್ಕರ್ಣಿಕಾಲಯೇ ।**
**ಚಿಂತಯೇಚ್ಚ ಶ್ರಿಯಂ ಪದ್ಮೇ ಭೂ ದುರ್ಗೇ ನಾಲ**
**ಕಂಡಯೋಃ ॥೨೧೫॥**

ದಹರವೆಂಬ ಹೃದಯ ಕಮಲದಲ್ಲಿ ಪ್ರಕಾಶಿಸುವ ಕರ್ಣಿಕೆ ಎಂಬ ಜಾಗವಿರುವುದು; ಕಮಲದಲ್ಲಿ ಶ್ರೀ ದೇವಿಯನ್ನು ನಾಲ ಮತ್ತು ಕಂದ (ಗಡ್ಡೆ) ದಲ್ಲಿ ಭೂ ಮತ್ತು ದುರ್ಗಾದೇವಿಯರನ್ನು ತಿಳಿಯುವುದು.

**ಅಷ್ಟ ಪತ್ರೇಷು ಶಕ್ತ್ಯಾದ್ಯಾ ವಿಜ್ಞೇಯಾ ಹರಿಮೂರ್ತಯಃ ।**
**ವಿದಿಗ್ದಲೇಷು ಚೈಕೈಕಾ ದ್ವೇದ್ವೇ ವೈ ದಿಗ್ದಲೇಷ್ವಪಿ ॥೨೧೬॥**

ಪದ್ಮದ ಎಂಟು ದಳಗಳಲ್ಲಿಯೂ ಶಕ್ತಿಯೇ ಮೊದಲಾದ ಶ್ರೀಹರಿಯ ಹನ್ನೆರಡು ಮೂರ್ತಿಗಳನ್ನು ತಿಳಿಯುವುದು ; ಪೂರ್ವದಲ್ಲಿ ಶಕ್ತಿ, ಪ್ರತಿಷ್ಠಾ, ಆಗ್ನೇಯದಲ್ಲಿ ಸಂವಿತ್, ದಕ್ಷಿಣದಲ್ಲಿ ಸ್ಫೂರ್ತಿ, ಪ್ರಕೃತಿ, ನೈಋತ್ಯದಲ್ಲಿ ಕಲಾ, ಪಶ್ಚಿಮದಲ್ಲಿ ವಿದ್ಯಾ, ಮತಿ, ವಾಯವ್ಯದಲ್ಲಿ ನಿಯತಿ, ಉತ್ತರದಲ್ಲಿ ಮಾಯಾ, ಕಾಲ, ಈಶಾನ್ಯದಲ್ಲಿ – ಪುರುಷ – ಹೀಗೆ ಭಾವಿಸುವುದು.

**ವಸವೋಽಷ್ಟ ಸಂಖ್ಯಾಕಾಃ ಪದ್ಮಪತ್ರಾಭಿಮಾನಿನಃ ।**
**ಸರಸ್ವತೀ ಭಾರತೀ ಚ ಹೃತ್ಪದ್ಮ ಸ್ಯಾಭಿಮಾನಿನೀ ॥೨೧೭॥**

ಆ ಕಮಲದ ಎಂಟು ದಳಗಳಿಗೆ ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು, ವಿಭಾವಸು ಮತ್ತು ದ್ಯು ಎಂಬ ಎಂಟು ವಸುಗಳೂ

ಅಭಿಮಾನಿಗಳು ; ಸರಸ್ವತೀ ಮತ್ತು ಭಾರತೀದೇವಿಯರಿಬ್ಬರೂ ಹೃದಯದಲ್ಲಿರುವ ಕಮಲದ ಅಭಿಮಾನಿಗಳು.

**ಹೃತ್ಪದ್ಮ ಕರ್ಣಿಕಾಗ್ರಸ್ಥಃ ಸರ್ವಾಂಗುಷ್ಠ ಪ್ರಮಾಣಕಃ |**
**ಅಗ್ರೇಶಃ ಪ್ರಾಜ್ಞನಾಮಾಸೌ ಜೀವಾನಾಂ ಚ ಸುಷುಪ್ತಿದಃ ||೨೧೮||**

ಹೃದಯ ಕಮಲದ ಕರ್ಣಿಕೆಯ ತುದಿಯಲ್ಲಿ ಸಕಲರ ಕೈ ಹೆಬ್ಬೆರಳಿನ ಒಂದು ಪರ್ವದಷ್ಟು ಉದ್ದವಾಗಿ, ಪ್ರಾಜ್ಞನೆಂಬ ಅಗ್ರೇಶನು ಜೀವರಿಗೆ ಸುಖನಿದ್ರೆಯನ್ನು ಕೊಡುವವನು.

**ಸರ್ವತೋ ಹೃದಯಾಕಾಶೆ ವ್ಯಾಪ್ತಃ ಪ್ರಾದೇಶಸಂಮಿತಃ |**
**ಜೀವಾಧಾರಃ ಸವಿಜ್ಞೇಯಃ ಪರಃ ಪುರುಷನಾಮಕಃ ||೨೧೯||**

ಸಕಲ ಕಡೆಯಿಂದಲೂ ಹೃದಯದ ಅವಕಾಶದಲ್ಲಿ ಪ್ರಾದೇಶ ಪರಿಮಿತಿಯುಳ್ಳ (ಒಂದು ಜೋಟು 7 inches) ಜೀವನಿಗೆ ಆಧಾರನಾದ ಪುರುಷ ನಾಮಕನಾದ ಗುಣಪೂರ್ಣನಾದ ಶ್ರೀಹರಿಯನ್ನು ತಿಳಿಯುವುದು.

**ಕರ್ಣಿಕಾ ಮೂಲಗೋ ವಿಷ್ಣುರಂಗುಷ್ಠಾಗ್ರ ಪ್ರಮಾಣಕಃ |**
**ಮೂಲೇಶ ಶ್ಚಿಂತನೀಯೋ ಯಂ ವಿಜ್ಞಾನಾತ್ಮೇತಿಯಂ ವಿದುಃ ||೨೨೦||**

ಕರ್ಣಿಕೆಯ ಮೂಲದಲ್ಲಿ ಅಂಗುಷ್ಠದ ತುದಿಯ ಭಾಗದಷ್ಟು ಗಾತ್ರನಾಗಿ ಮೂಲೇಶನು ಇರುವನು ; ಆತನನ್ನು ವಿಜ್ಞಾನಾತ್ಮನೆಂದು ಹೇಳುವರು.

**ಏತದ್ರೂಪತ್ರಯಂ ವಿಷ್ಣೋಃ ದಹರಾಖ್ಯಂ ಪ್ರಕೀರ್ತಿತಮ್ |**
**ಮೂಲೇಶಪಾದಮಾಶ್ರಿತ್ಯ ಮುಖ್ಯಪ್ರಾಣೋಸ್ಯ ಸನ್ಮುಖಃ ||೨೨೧||**

ಶ್ರೀ ವಿಷ್ಣುವಿನ ಈ ಮೂರು ರೂಪಗಳು ದಹರವೆಂದು ಪ್ರಸಿದ್ಧವಾಗಿರುವುದು ; ಮೂಲೇಶನ ಪಾದವನ್ನು ಆಶ್ರೈಸಿ ಆತನಿಗೆ ಅಭಿಮುಖನಾಗಿ ಮುಖ್ಯಪ್ರಾಣನಿರುವನು.

**ಕೃತಾಂಜಲಿಪುಟಃ ಪ್ರಾಚೀ ಮುಖಸ್ತಿಷ್ಠತಿ ನಿತ್ಯಶಃ ।**
**ತಸ್ಮಿಂಶ್ಚ ಶುಚಿಷದ್ವಿಷ್ಣುಃ ಪ್ರಾಣಶ್ಚಿಂತ್ಯಶ್ಚ ಲಾಲುಕಃ ॥೨೨೨॥**

ಕೈಜೋಡಿಸಿಕೊಂಡು ಪೂರ್ವಾಭಿಮುಖನಾಗಿ ಯಾವಾಗಲೂ ಇರುವನು ; ಆ ಮುಖ್ಯ ಪ್ರಾಣನಲ್ಲಿ ಶುಚಿಷತ್ ಎಂಬ ವಿಷ್ಣುವು ಇರುವನು ; ಮತ್ತು ಲಾಲುಕನೆಂಬ ಪ್ರಾಣನನ್ನು ಅಲ್ಲಿ ಧ್ಯಾನಿಸಬೇಕು.

**ಅಪರಾಜಿತರೂಪತ್ವಾದ ಪರಾಜಿತಸೇನಕಃ ।**
**ಇಂದ್ರೋ ವೈಕುಂಠ ಇತ್ಯೇತೇ ವಿಜ್ಞೇಯಾಸ್ತದುಪಾಸಕೈಃ ॥೨೨೩॥**

ಎಂದಿಗೂ ಪರಾಜಯ (unconquerable) ರಹಿತವಾದ ರೂಪವುಳ್ಳವನಾದುದರಿಂದ ಅಪರಾಜಿತರಾದ ಅನುಯಾಯಿಗಳಿಂದ ಸಹಿತನಾದವನು ; ಆತನನ್ನು ಉಪಾಸಕರು ಇಂದ್ರ, ವೈಕುಂಠ ಮೊದಲಾದ ನಾಮ ಮತ್ತು ರೂಪಗಳಿಂದ ಧ್ಯಾನಿಸುವರು.

**ಮುಖ್ಯಪ್ರಾಣೋ ಶ್ವಾಸರೂಪ ಹಂಸ ಮಂತ್ರಂ ಜಪೇತ್ಸದಾ ।**
**ಜೀವೇನ ಕಾರಯತ್ಯೇವ ತಜ್ಜಪಂ ಹರಿತುಷ್ಟಯೆ ॥೨೨೪॥**

ಮುಖ್ಯ ಪ್ರಾಣನು ಶ್ವಾಸಾತ್ಮಕವಾದ, ಸರ್ವದಾ ಹಂಸಮಂತ್ರವನ್ನು ಜಪಿಸುವನು ; ಜೀವನಿಂದಲೂ ಆ ಮಂತ್ರಜಪವನ್ನು ಶ್ರೀಹರಿಯ ಪ್ರಸನ್ನತೆಗಾಗಿ ಮಾಡಿಸುವನು.

**ಏಕ ವಿಂಶತಿ ಸಹಸ್ರಾಣಿ ಶ್ವಾಸನಂ ಷಟ್ಛತಾನಿ ಚ ।**
**ಭವಂತ್ಯೇತಚ್ಚ ವಿಜ್ಞಾಯ ಭಕ್ತ್ಯಾ ವಿಷ್ಣೌ ಸಮರ್ಪಯೇತ್॥೨೨೫॥**

(೨೧೬೦೦) ಇಪ್ಪತ್ತೊಂದು ಸಾವಿರದ ಆರುನೂರು ಸಂಖ್ಯೆಯ ಮಂತ್ರ ಜಪವು ಒಂದು ದಿನದಲ್ಲಿ ಆಗುವುದು; ಇದನ್ನು ಚೆನ್ನಾಗಿ ತಿಳಿದು ಭಕ್ತಿಯಿಂದ ಶ್ರೀ ವಿಷ್ಣುವಿನಲ್ಲಿ ಸಮರ್ಪಿಸುವುದು.

**ಸಹಸ್ರಧಾ ವಿಭಿನ್ನಂ ಬಾಲಾಗ್ರಮುಪಶಿಷ್ಯತೇ ।**
**ತಾವತ್ಪರಿಮಿತೋ ಜೀವಃ ಶಾಶ್ವತಃ ಸ್ವಪ್ರಕಾಶಕಃ ॥೨೨೬॥**

(ಕುದುರೆಯ) ಬಾಲದ ಕೊನೆಯ ತುದಿಯನ್ನು ಒಂದು ಸಾವಿರ ಭಾಗ ಮಾಡಿದರೆ ಒಂದು ಭಾಗವೆಷ್ಟಿರುವುದೊ ಅಷ್ಟೆ ಜೀವನ ಸ್ವರೂಪದ ಪರಿಮಿತಿಯು; ಈ ಜೀವನು ನಿತ್ಯನು, ಮತ್ತು ಶ್ರೀ ಹರಿಯ ಅನುಗ್ರಹದಿಂದ ಜ್ಞಾನ ಪ್ರಕಾಶವುಳ್ಳವನು.

**ಪ್ರಾಣೋಪಪಾದಮಾಶ್ರಿತ್ಯ ನಿತ್ಯಸ್ತಿಷ್ಠತಿ ಕರ್ಮಕೃತ್ ।**
**ವಿಷ್ಣೋರಂಗಾನಿ ಜೀವಾಂಗೇಷ್ವಪ ಭಿನ್ನಾನಿ ನಿತ್ಯಶಃ ॥೨೨೭॥**

ಮುಖ್ಯಪ್ರಾಣನ ಪಾದದ್ವಯಗಳನ್ನು ಆಶ್ರಯಿಸಿ ಯಾವಾಗಲೂ ಈ ಜೀವನು ಕರ್ಮಮಾಡುವ ಯೋಗ್ಯತೆ ಉಳ್ಳವನಾಗಿ ಇರುತ್ತಾನೆ; ಯಾವಾಗಲೂ ಶ್ರೀ ವಿಷ್ಣುವಿನ ಅವಯವಗಳು ಜೀವನ ಅಂಗಾಂಗಗಳಲ್ಲಿರುವುವು.

**ವಾಸುದೇವೋ ಹರೇಃ ಶೀರ್ಷಂ ಜೀವಶೀರ್ಷೆ ವ್ಯವಸ್ಥಿತಃ ।**
**ನಾರಾಯಣೋ ಹರೇರ್ಮಧ್ಯಃ ಜೀವಸಂದೋಹ ಸಂಸ್ಥಿತಃ ॥೨೨೮॥**

ಪಂಚನಾರೀ ತುರಗ ಅಥವಾ ನವನಾರೀ ಕುಂಜರದಂತೆ ಶ್ರೀ ಹರಿಯ ಒಂದೊಂದು ಅವಯವಗಳೂ ಆತನ ಅನೇಕ ವಾಸುದೇವಾದಿ ರೂಪಗಳೇ ಆಗಿರುವುವು; ತತ್ಕ್ರಮವನ್ನು ಹೇಳುತ್ತಾರೆ; ವಾಸುದೇವನು ಹರಿಯ ತಲೆಯು; ಜೀವನ ಶಿರಸ್ಸಿನಲ್ಲಿರುವನು; ನಾರಾಯಣನು ಆತನ ಮಧ್ಯಪ್ರದೇಶವು; ಜೀವನ ಅದೇ ಪ್ರದೇಶದಲ್ಲಿರುವನು.

ವಿಷ್ಣೋರ್ದಕ್ಷಿಣಃ ಪಕ್ಷಃ ಪ್ರದ್ಯುಮ್ನೋ ಜೀವಪಕ್ಷಗಃ ।
ವಾಮಪಕ್ಷೋಽನಿರುದ್ಧಶ್ಚ ಜೀವವಾಮೇ ಚ ಸಂಸ್ಥಿತಃ ॥೨೨೯॥

ವಿಷ್ಣುವಿನ ಬಲಭಾಗವು ಪ್ರದ್ಯುಮ್ನನು; ಜೀವನ ಬಲಭಾಗದಲ್ಲಿರುವನು; ಎಡಭಾಗವು ಅನಿರುದ್ಧನು; ಜೀವನ ಎಡಗಡೆಯ ಪಕ್ಕೆಯಲ್ಲಿರುವನು.

ಸಂಕರ್ಷಣೋ ಹರೇರಂಘ್ರಿರ್ಜೀವ ಪಾದೇ ಚ ಸಂಸ್ಥಿತಃ ।
ವಿಷ್ಣೋರ್ವಾಗ್ಭಾರ್ಗವೋರಾಮೋ ಜೀವವಾಚಿ
ಪ್ರತಿಷ್ಠಿತಃ ॥೨೩೦॥

ಸಂಕರ್ಷಣನು ಹರಿಯ ಪಾದಗಳು; ಅತನೇ ಜೀವನ ಕಾಲುಗಳಲ್ಲಿರುವನು; ವಿಷ್ಣುವಿನ ವಾಕ್ ಪರಶುರಾಮನು; ಜೀವನ ವಾಗಿಂದ್ರಿಯದಲ್ಲಿರುವನು.

ನೃಸಿಂಹಶ್ಚ ಹರೇಃ ಪ್ರಾಣಃ ಜೀವಪ್ರಾಣೇ ಚ ಸಂಸ್ಥಿತಃ ।
ಹರೇಶ್ಚಕ್ಷುಶ್ಚ ಕಪಿಲೋ ಜೀವಚಕ್ಷುಸ್ಥಿತೋ ಹರಿಃ ॥೨೩೧॥

ಹರಿಯ ಪ್ರಾಣನು ನರಸಿಂಹನು; ಜೀವನ ಪ್ರಾಣನಲ್ಲಿರುವನು; ಹರಿಯ ನೇತ್ರವು ಕಪಿಲನು; ಜೀವನ ಕಣ್ಣುಗಳಲ್ಲಿರುವನು.

ಜೀವಾಭಿಮಾನೀ ಶೇಷಶ್ಚ ತಸ್ಮಿನ್ ಸಂಕರ್ಷಣಃ ಸ್ಥಿತಃ ।
ಅನಿರುದ್ಧಾದಿಭಿಃ ಸೂಕ್ಷ್ಮ ಸೃಷ್ಟೌ ದೇಹಾ ವಿನಿರ್ಮಿತಾಃ ॥೨೩೨॥

ಜೀವರ ಅಭಿಮಾನಿಯು ಶೇಷದೇವರು; ಅವನಲ್ಲಿ ಸಂಕರ್ಷಣನಿರುವನು; ಅನಿರುದ್ಧಾದಿಗಳಿಂದ ಸೂಕ್ಷ್ಮ ಸೃಷ್ಟಿಕಾಲದಲ್ಲಿ ಜೀವನ ಸೂಕ್ಷ್ಮಾದಿ ದೇಹಗಳು ನಿರ್ಮಿಸಲ್ಪಟ್ಟವು.

ಕೋಶರೂಪಾ ಶ್ಚತುರ್ಷ್ವೇಷು ಹ್ಯನಿರುದ್ಧಾದಯಃ ಸ್ಥಿತಾಃ ।
ತೈರಾವೃತೋ ಲಿಂಗದೇಹ ಸ್ತ್ವಷೋಡಶ ಕಲಾತ್ಮಕಃ ॥೨೩೩॥

ಅವು, ಅನ್ನಮಯ, ಪ್ರಾಣಮಯ, ಮನೋಮಯ, ಆನಂದಮಯ ಮತ್ತು ವಿಜ್ಞಾನಮಯ ಎಂಬ ಐದು ಕೋಶರೂಪಗಳು; ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಪಂಚ ತನ್ಮಾತ್ರಗಳು, ಮನಸ್ಸು ಹೀಗೆ ಹದಿನಾರು ಕಲೆಗಳಿಂದ ಕೂಡಿದ ಲಿಂಗದೇಹವನ್ನು ಆ ಸೂಕ್ಷ್ಮದೇಹಗಳು ಆವರಿಸಿಕೊಂಡಿವೆ.

**ಜೀವಾವರಣ ಭೂತೋಽಸ್ಯ ವಾಸುದೇವೋ ನಿಯಾಮಕಃ ।**
**ಅನಾದಿಲಿಂಗದೇಹೇಸ್ಮಿನ್ ಜೀವಸ್ತಿಷ್ಠತ್ಯ ಶಾಶ್ವತೇ ॥೨೩೪॥**

ಜೀವನ ಆವರಣರೂಪವಾದ ಈ ಲಿಂಗದೇಹದ ನಿಯಾಮಕನು ವಾಸುದೇವನು; ಈ ಅನಾದಿಯಾದ ಆದರೆ ನಿತ್ಯವಲ್ಲದ (to be removed) ಲಿಂಗದೇಹದಲ್ಲಿ ಜೀವನು ಅಡಗಿರುವನು.

**ದೇವಾನಾಮಂಶತೋ ವ್ಯಾಪ್ತಿರ್ದೇಹೇ ನೃಣಾಂ ಪ್ರಕಾಶಿತಃ ।**
**ಸ್ವೇಂದ್ರಿಯೈರ್ಬಾಹ್ಯ ಸಂಬಂಧಾತ್ ವಿಷಯಜ್ಞಾನವಾನ್**
**ಭವೇತ್ ॥೨೩೫॥**

ದೇವತೆಗಳ ಅಂಶದ ದೆಸೆಯಿಂದ ವ್ಯಾಪ್ತಿಯು ಮನುಜರ ದೇಹದಲ್ಲಿ ಪ್ರಕಾಶಮಾನವಾಗುವುದು; ಸ್ವರೂಪೇಂದ್ರಿಯಗಳಿಂದ ಸ್ಥೂಲದೇಹದ ಇಂದ್ರಿಯಗಳಿಗೆ ಸಂಬಂಧವಿರುವದರ ದೆಸೆಯಿಂದ ಈತನು ವಿಷಯಗಳ ಜ್ಞಾನಿಯಾಗುತ್ತಾನೆ.

**ಚರಾಮ್ಯಹಂ ಕರೋಮೀದಂ ಮಮೇತ್ಯಜ್ಞಾನ ಮೋಹಿತಃ ।**
**ಲಿಪ್ಯತೇಽತಃ ಕರ್ಮಬಂಧೈಸ್ತದ ಪಾಯಾದ್ವಿಮುಚ್ಯತೇ ।॥೨೩೬॥**

ನಾನು ಭೋಜನ ಮಾಡುವೆನು; ಇದನ್ನು ಮಾಡುವೆನು; ಇದು ನನ್ನದು; ನನ್ನ ಅಧೀನವಾದುದು; ಇಂತಹ ಅಜ್ಞಾನದಿಂದ ಭ್ರಾಂತನಾಗಿ

ಪಾಪ ಪುಣ್ಯಾದಿಕರ್ಮ ಬಂಧನಕ್ಕೊಳಗಾಗುವನು ; ಈ ಅಹಂಕಾರ ಮಮಕಾರಗಳೆರಡೂ ನಾಶವಾದರೆ ಮುಕ್ತನಾಗುವನು.

**ಜೀವಹೃತ್ಕಮಲಂ ಶ್ವೇತಮಷ್ಟಪತ್ರಂ ಸಕರ್ಣಿಕಮ್ ।**
**ಧ್ಯೇಯಸ್ತತ್ಕರ್ಣಿಕಾವಿಷ್ಟೋ ಹ್ಯಾತ್ಮಾನಾರಾಯಣಃ ಪರಃ ॥೨೩೭॥**

ಜೀವ ಸ್ವರೂಪದ ಹೃದಯದಲ್ಲಿ ಬಿಳಿಯ ಬಣ್ಣದ, ಕರ್ಣಿಕೆಯಿಂದ ಸಹಿತವಾದ, ಎಂಟು ದಳದ ಕಮಲವಿರುವುದು; ಆ ಕರ್ಣಿಕೆಯಲ್ಲಿ ಆತ್ಮನೆಂಬ ಗುಣಪೂರ್ಣನೂ ಲೋಕ ಮತ್ತು ಜೀವವಿಲಕ್ಷಣನೂ ಆದ ನಾರಾಯಣನು ಇರುವನು ; ಆತನನ್ನು ಧ್ಯಾನಮಾಡಬೇಕು.

**ಜೀವಹೃನ್ಮಂಡಲಾವಿಷ್ಟಃ ಶ್ಯಾಮೋ ಹೃದಯ ನಾಮಕಃ।**
**ನಾರಸಿಂಹಃ ಸದಾಜೀವ ಸಂಸ್ಥಿತೋ ಜೀವನಾಮಕಃ ॥೨೩೮॥**

ಜೀವನ ಹೃದಯದ ಅವ್ಯಾಕೃತಾಕಾಶದಲ್ಲಿ ಶ್ಯಾಮವರ್ಣದ ಹೃದಯನೆಂಬ ನರಸಿಂಹನು ಸದಾ ಜೀವನಾಮದಿಂದಲೇ ಜೀವನಲ್ಲಿರುವನು.

**ಅನಿರುದ್ಧೋಽಪಿ ಜೀವಾಂತಃ ಶರೀರೇ ವ್ಯಾಪ್ಯ ತಿಷ್ಠತಿ ।**
**ಸ ಸಾಕ್ಷಾಚ್ಛಬಲೋ ವಿಷ್ಣುಃ ಶರೀರ ಇತಿ ನಾಮಕಃ ॥೨೩೯॥**

ಜೀವನ ಒಳಶರೀರದಲ್ಲಿ ಅನಿರುದ್ಧನು ತುಂಬಿರುವನು; ಆತನು ಬಿಳಿಯ ಬಣ್ಣದಿಂದಿರುವನು ; ಶರೀರ ಎಂದು ಹೇಳಲ್ಪಡುವನು; ಇದೇ ಅನಿರುದ್ಧ ಶರೀರವು.

**ಜೀವಾಂತಃ ಪ್ರೇರಕೋ ವಿಷ್ಣುರಂತರಾತ್ಮೇತಿ ಯಂ ವಿದುಃ ।**
**ಸ ಚೋಪಾಸ್ಯಃ ಸದೈವೇಷ್ಟಃ ಸದಾ ಜೀವಚರೋ ಹರಿಃ ॥೨೪೦॥**

ಜೀವನ ಅಂತರಂಗದಲ್ಲಿ ಪ್ರೇರಣೆಮಾಡುವ ವಿಷ್ಣುವು ಅಂತರಾತ್ಮನೆಂಬ ನಾಮವುಳ್ಳವನು ; ಆತನು ಯಾವಾಗಲೂ ಜೀವರ ಕರ್ಮಫಲ ಭೋಜಕ ನಾಗಿ ಸಕಲರಿಗೂ ಅಪೇಕ್ಷಿತನಾದುದರಿಂದ ಸರ್ವರಿಂದಲೂ ಉಪಾಸ್ಯನು.

ಸೋಹಂಕಾರ ಇತಿ ಪ್ರೋಕ್ತಃ ಸರ್ವಾಹಂಕಾರ ಭಂಜಕಃ ।
ಮತ್ಸ್ಯಾದ್ಯಾಪಿ ವೈ ವಿಷ್ಣೋ ರವತಾರಾಶ್ಚ ಸರ್ವಶಃ ॥೨೪೧॥
ಜೀವಾಂತಃ ಸಂಸ್ಥಿತಾ ನಿತ್ಯಮುಪಾಸ್ಯಾಃ ಶಕ್ತಿ ಸಂಯುತಾಃ ।

ಅಂತರಾತ್ಮನಿಗೆ ಅಹಂಕಾರನೆಂದು ನಾಮ ; ಆತನು ಸಕಲ ಅಹಂಕಾ ರವನ್ನು ನಾಶಮಾಡುವವನು ; ವಿಷ್ಣುವಿನ ಮತ್ಸ್ಯ, ಕೂರ್ಮ, ವರಾಹ, ಮೊದಲಾದ ಅವತಾರಗಳು ಸಕಲವೂ ಜೀವರಲ್ಲಿ ಒಳಗೆ ಇರುತ್ತವೆ; ಶಕ್ತಿ ಸಮೇತವಾದ ಆ ರೂಪಗಳನ್ನೂ ಶಕ್ತಿಯನ್ನನುಸರಿಸಿ ನಿತ್ಯವೂ ಉಪಾಸನೆ ಮಾಡಬೇಕು.

ಏವಂ ವಿದ್ವಾನತೋ ಬಾಹ್ಯ ಹೃದಯಾಂಬುಜ ಮಂದಿರೆ ॥೨೪೨॥

ನಾನಾರತ್ನೋಜ್ಜ್ವಲದ್ಧೇಮ ಮಂಟಪಂ ತದ್ರುಮಾತ್ಮಕಮ್ ।
ಚಿಂತಯೇ ದ್ಮೌಕ್ತಿಕಾಭಾಸಂ ತಸ್ಮಿನ್ ತತ್ಕರ್ಣಿಕಾತಲೇ ॥೨೪೩॥

ದ್ವಿಷಟ್ಕೋಣಾದಿತ್ಯಬಿಂಬಂ ತತ್ಪ್ರವೃತ್ತೇಂದು ಮಂಡಲಮ್ ।
ತಸ್ಮಿನ್ ತ್ರಿಕೋಣಮಾಗ್ನೇಯಿಮಾ ಮಂಡಲಂ
ಸುವಿರಾಜಿತಮ್ ॥೨೪೪॥

ಹೀಗೆ ತಿಳಿದಿರುವ ಜ್ಞಾನಿಯು ನಂತರ ಹೊರಗಿನ ಸ್ಥೂಲ ದೇಹದ ಹೃದಯ ಕಮಲದ ಮನೆಯಲ್ಲಿ ನಾನಾಬಗೆಯ ರತ್ನಗಳಿಂದ ಪ್ರಕಾಶಿಸುವ ಭಂಗಾರದ ಮಂಟಪವನ್ನು ಚಿಂತಿಸುವುದು ; ಇದು ಸಾಕ್ಷಾಲ್ಲಕ್ಷ್ಮ್ಯಾತ್ಮಕ ವಾದುದು ; ಮುತ್ತಿನಂತೆ ಪ್ರಕಾಶಿಸುವುದು ; ಅದರ ಕರ್ಣಿಕೆಯಲ್ಲಿ ಹನ್ನೆರಡು

ಕೋಣಾತ್ಮಕವಾದ ಸೂರ್ಯಬಿಂಬವೂ ತನ್ಮಧ್ಯದಲ್ಲಿ ವರ್ತುಳಾಕಾರವಾದ ಚಂದ್ರಮಂಡಲವೂ ಆದರಲ್ಲಿ ತ್ರಿಕೋಣಾತ್ಮಕವಾದ ಅಗ್ನಿಮಂಡಲವೂ ಪ್ರಕಾಶಿಸುತ್ತಿರುವುದು.

**ತಸ್ಮಿನ್ ಲಕ್ಷ್ಮ್ಯಾತ್ಮಕಂ ತಲ್ಪಂ ಶೇಷಪರ್ಯಂಕ ಶೋಭಿತಮ್ ।**
**ಚಿತ್ರರತ್ನಾಸನಾಕೀರ್ಣಂ ಚಿಂತಯೇತ್ಸೋಪ ಬರ್ಹಣಮ್ ॥೨೪೫॥**

ಅಲ್ಲಿ ಶೇಷನೆಂಬ ಮಂಚವು, ಲಕ್ಷ್ಮ್ಯಾತ್ಮಕವಾದ ಹಾಸಿಗೆಯೂ, ವಿಚಿತ್ರ ರತ್ನಮಯವಾದ ಆಸನವು ಮತ್ತು ಅಲ್ಲಿ ಒರಗದಿಂಬು ಇರುವುದು.

**ತತ್ರಸ್ಥೋ ಭಗವಾನ್ವಿಷ್ಣುಃ ಪರಮಾತ್ಮೇತ್ಯುದಾಹೃತಃ ।**
**ಸಾಕ್ಷಾನ್ನಾರಾಯಣಃ ಸರ್ವೈ ರುಪಾಸ್ಯೋ ಬಿಂಬನಾಮಕಃ ॥೨೪೬॥**

ಅಲ್ಲಿರುವ ಗುಣಪೂರ್ಣನಾದ ಶ್ರೀವಿಷ್ಣುವು ಪರಮಾತ್ಮನೆಂದು ಹೇಳಲ್ಪಡುವನು; ಆತನೇ ಸಾಕ್ಷಾನ್ನಾರಾಯಣನು, ಬಿಂಬನೆಂದು ಆತನು ಸಕಲರಿಂದಲೂ ಉಪಾಸಿಸಲ್ಪಡುವನು.

**ಶ್ವೇತ ದ್ವೀಪ ಗತೋ ವಿಷ್ಣುಃ ಪರ್ಯಂಕ ಬ್ರಹ್ಮನಾಮಕಃ ।**
**ನಾರಾಯಣೋ ಹಿ ಭಗವಾನನಾದಿ ಸೃತಿ ಸಂಸ್ಥಿತಾನ್ ॥೨೪೭॥**

ಶ್ವೇತದ್ವೀಪದಲ್ಲಿರುವ ಶ್ರೀವಿಷ್ಣುವು ಬ್ರಹ್ಮನೆಂಬ ಮಂಚದಲ್ಲಿರುವನು; ಆತನೇ ನಾರಾಯಣನು; ಅನಾದಿಕಾಲದಿಂದ ಸಂಸೃತಿಯಲ್ಲಿರುವ (ಸಂಸಾರ-ಜನಿಸುವ ಮತ್ತು ಮೃತವಾಗುವ ದೇಹವನ್ನು ಹೊಂದುವ ಯೋಗ್ಯತೆ) ಜೀವರನ್ನು,

**ಅವೇಕ್ಷ್ಯ ಲೋಕಾನ್ಕೃಪಯಾ ತಸ್ಮಾನ್ಮೋಚಯಿತುಂ ಪ್ರಭುಃ ।**
**ತದ್ಯೋಗ್ಯ ಪದದಾನಾಯ ತೇಷಾಮಾವಿಶ್ಯ ಹೃದ್ಗುಹಾಮ್ ॥೨೪೮॥**

ದಯೆಯಿಂದ ಇವರನ್ನು ನೋಡಿ ಆ ಸಂಸಾರದ ದೆಸೆಯಿಂದ ಬಿಡುಗಡೆ ಮಾಡಲು ಮತ್ತು ಅವರವರ ಯೋಗ್ಯತೆಗೆ ತಕ್ಕ, ಇಂದ್ರ, ರುದ್ರ, ಬ್ರಹ್ಮ ಮೊದಲಾದ ಪದವಿಯನ್ನು ಕೊಡಲು ಸಮರ್ಥನಾದ ಶ್ರೀಹರಿಯು ಅವರ ಹೃದಯವೆಂಬ ಅಂತರ್ಗೃಹವನ್ನು ಹೊಕ್ಕು,

ತದ್ಯೋಗ್ಯತಾನುಸಾರೇಣ ಸಾಧನೈಃ ಸಮುಪಾಸಿತಃ ||
ನಿರಸ್ಯ ಸ್ವಾಪರೋಕ್ಷ್ಯೇಣ ಕೃತಂ ಕರ್ಮ ಶುಭಾಶುಭಮ್ ||೨೪೯||

ಅವರವರ ಯೋಗ್ಯತೆಯನ್ನನುಸರಿಸಿ ಸಾಧನಗಳಿಂದ ಚೆನ್ನಾಗಿ ಶ್ರವಣ, ಮನನ, ನಿಧಿಧ್ಯಾಸನರೂಪವಾದ ಉಪಾಸನೆಮಾಡಲ್ಪಡುವವನಾಗಿ ತನ್ನ ಅಪರೋಕ್ಷ ದರ್ಶನವಿತ್ತು ಅವರು ಮಾಡಿದ್ದ ಪುಣ್ಯ ಪಾಪಕರ್ಮಗಳನ್ನೆಲ್ಲಾ ಕಳೆದು,

ಮೋಚಯಿತ್ವಾ ಭೂತಬಂಧಾ ಜ್ಜೀವ ಸ್ವಾನಂದದಾಯಕಃ |
ಶ್ವೇತ ದ್ವೀಪ ಗತೋ ಯಶ್ಚ ಬಾಹ್ಯಹೃತ್ಪದ್ಮಗಶ್ಚ ಯಃ ||೨೫೦||

ಸಂಸಾರ ಕಾರಣವಾದ ಭೂತಬಂಧನದ ದೆಸೆಯಿಂದ ಬಿಡಿಸಿ ಅವರವರ ಸ್ವರೂಪಾನಂದವನ್ನು ಕೊಡುವನು ; ಶ್ವೇತದ್ವೀಪದಲ್ಲಿರುವ, ಶ್ರೀನಾರಾಯಣನು, ಜೀವರ, ಸ್ಥೂಲಶರೀರದ ಹೃದಯಕಮಲದಲ್ಲಿರುವನು.

ತಯೋರೈಕ್ಯಂ ವಿಜಾನೀಯಾ ಜ್ಜೀವ ಹೃತ್ಪದ್ಮಗಸ್ಯ ಚ |
ಶರೀರ ಸರ್ವನಾಡೀಷು ನಿವಿಷ್ಟಾನಾಂ ಚೈವ ಹರೇಃ ||೨೫೧||

ಬ್ರಹ್ಮಾಂಡಾಂತರ್ಬಹಿಸ್ಥಾನಾಂ ರೂಪಾಣಾಮಪಿ ಸರ್ವಶಃ |
ಆತ್ಮ ಹೃತ್ಪದ್ಮಗೇನೈಕ್ಯಂ ಚಿಂತನಂ ಪರಮಾರ್ಚನಮ್ ||೨೫೨||

ಹಿಂದಿನ ಶ್ಲೋಕದಲ್ಲಿ ಹೇಳಿದ ಎರಡು ರೂಪಗಳೂ ಒಂದೇ ಎಂದು ತಿಳಿಯುವುದು ; ದೇಹದ ಸಕಲ ನಾಡಿಗಳಲ್ಲಿಯೂ ಸನ್ನಿಹಿತವಾದ ಭಗವ

ದ್ರೂಪಗಳಿಗೂ, ಬ್ರಹ್ಮಾಂಡದ ಒಳಹೊರಗೆ ಇರುವ ಸಕಲ ರೂಪಗಳಿಗೂ, ತನ್ನ ದೇಹದ ಹೃದಯಕಮಲದಲ್ಲಿರುವ ರೂಪಕ್ಕೂ ಏಕೀಭಾವವನ್ನು ತಿಳಿಯುವುದೇ ಪರಮಪುರುಷನ ಉತ್ತಮವಾದ ಆರಾಧನೆಯು.

ಹೃತ್ಪದ್ಮ ಕರ್ಣಿಕಾವಿಷ್ಟಂ ಬಿಂಬನಾಮಾನಮೀಶ್ವರಮ್ ।
ಉದ್ಯದಾದಿತ್ಯಸಂಕಾಶಂ ಸಚ್ಚಿದಾನಂದ ವಿಗ್ರಹಮ್ ॥೨೫೩॥

ಪೀತಾಂಬರಧರಂ ದೇವಂ ಶಂಖಚಕ್ರಗದಾಧರಮ್ ।
ಹೇಮಹಂಸಕ ಮಂಜೀರ ಕಿಂಕಿಣೀಕಾಂಘ್ರಿ ಪಂಕಜಮ್ ॥೨೫೪॥

ಸ್ವರ್ಣಾಂಬರಲಸತ್ಕಾಂಚೀ ಭಾಸ್ವತ್ಕಟಿತಟೋದರಮ್ ।
ಹೇಮಕಂಕಣಕೇಯೂರ ಮುದ್ರಿಕಾಬಾಹುಭೂಷಣಮ್ ॥೨೫೫॥

ಮುಕ್ತಾರತ್ನಪ್ರವಾಲಾಭಂ ಸ್ವರ್ಣಗ್ರೈವೇಯ ವಕ್ಷಸಮ್ ।
ಶ್ರೀವತ್ಸಕೌಸ್ತುಭೋರಸ್ಕಂ ನಾನಾಭೂಷಣ ಭೂಷಿತಮ್ ॥೨೫೬॥

ಮಂದಸ್ಮಿತ ಮುಖಾಂಭೋಜ ಮರವಿಂದಾಯತೇಕ್ಷಣಮ್ ।
ನೀಲಾಲಕ ಲಸತ್ಸ್ವರ್ಣ ಮುಕುಟ ಶ್ರುತಿಭೂಷಣಮ್ ॥೨೫೭॥

ಬ್ರಹ್ಮೇಶಾನಾದಿಭಿಃ ಸೇವ್ಯಂ ಸ್ವರೂಪಗಣಮಧ್ಯಗಮ್ ।
ಆಪಾದಮೌಳಿ ಪರ್ಯಂತಂ ಧ್ಯಾಯೇನ್ನಾರಾಯಣಂ
ಪರಮ್ ॥೨೫೮॥

ಉದಯಿಸುತ್ತಲಿರುವ ಸೂರ್ಯನಂತೆ ಪ್ರಕಾಶಮಾನನಾದ ನಿರ್ದುಷ್ಟನಾದ ಜ್ಞಾನಾನಂದಾತ್ಮನಾದ, ಪೀತಾಂಬರವನ್ನು ಉಟ್ಟಿರುವ, ಕ್ರೀಡಾದಿ ಗುಣವಿಶಿಷ್ಟನಾದ, ಶಂಖಚಕ್ರ ಗದಾಪದ್ಮಧಾರಿಯಾದ, ಹಂಸಪಕ್ಷಿಯ ಧ್ವನಿಯಂತೆ ಮಂಜುಳನಾದಮಾಡುವ ಗೆಜ್ಜೆಗಳಿಂದ ಸಹಿತವಾದ ಪಾದಕಮಲದ್ವಯಗಳುಳ್ಳ, ಪೀತಾಂಬರದಮೇಲೆ ಟೊಂಕದಲ್ಲಿ ಪ್ರಕಾಶಿಸುವ ರತ್ನಖಚಿತ

ವಾದ ಒಡ್ಯಾಣದಿಂದ ಬೆಳಗುವ ಕಟಿಭಾಗಗಳುಳ್ಳ, ಮುತ್ತು, ರತ್ನ, ಹವಳ ದಂತೆ ಹೊಳೆಯುವ ಭಂಗಾರದ ಕಂಠಹಾರದಿಂದ ಅಲಂಕೃತವಾದ ವಕ್ಷಸ್ಥಳ ವುಳ್ಳ, – ಭಂಗಾರದ ಬಾಹುಪುರಿ, ಕಡಗ, ಉಂಗುರುಗಳಿಂದ ಅಲಂಕೃತವಾದ ಬೆರಳುಗಳು, ಬಾಹುಗಳು ಉಳ್ಳ, ಶ್ರೀವತ್ಸ ಮತ್ತು ಕೌಸ್ತುಭರತ್ನಗಳೆರಡ ರಿಂದ ಅಲಂಕೃತವಾದ ಉರಸ್ಸುಳ್ಳ, ಇತರ ಅನೇಕ ಆಭರಣಗಳಿಂದ ಅಲಂ ಕೃತನಾದ, ಮಂದಹಾಸದಿಂದ ಕೂಡಿದ, ಅರಳಿದ ಕಮಲದಂತಿರುವ ಕಣ್ಣು ಗಳ ದೃಷ್ಟಿಯುಳ್ಳ ಮುಖಕಮಲವುಳ್ಳ, ಪ್ರಕಾಶಿಸುವ ರತ್ನಖಚಿತವಾದ ಭಂಗಾರದ ಕಿರೀಟದಿಂದ ಅಲಂಕೃತವಾದ ನೀಲವರ್ಣದ ಉಂಗುರುಂಗರ ದಂತಿರುವ ಕೂದಲುಗಳಿಂದ ತುಂಬಿರುವ ಶಿರಸ್ಸುಳ್ಳ, ಮಕರಾಕಾರವಾದ ರತ್ನದಕುಂಡಲಗಳಿಂದ ಕೂಡಿದ ಕಿವಿಗಳುಳ್ಳ, ಬ್ರಹ್ಮರುದ್ರಾದಿ ದೇವತೆಗಳಿಂದ ಸೇವಿಸಲ್ಪಡುತ್ತಿರುವ, ತನ್ನ ಅನಂತಸ್ವರೂಪಗಳ ಸಮೂಹಮಧ್ಯದಲ್ಲಿರುವ, ಬಿಂಬನೆಂಬ ಶ್ರೀಹರಿಯನ್ನು ಪಾದದಿಂದ ಶಿರಸ್ಸಿನವರೆಗೂ ಧ್ಯಾನಮಾಡು ವುದು.

ಧ್ಯಾನಂ ಚ ದ್ವಿವಿಧಂ ಪ್ರೋಕ್ತಂ ಖಂಡಾಖಂಡ ವಿಭೇದತಃ ।
ಏಕೈಕಶೋಂಗಾನಿ ಧಿಯಾ ಧಾರಣಂ ಖಂಡಮುಚ್ಯತೇ ॥೨೫॥

ಖಂಡ ಮತ್ತು ಅಖಂಡವೆಂಬ ಭೇದದಿಂದ ಧ್ಯಾನವು ಎರಡು ವಿಧ ವಾದುದು ; ಬುದ್ಧಿಯಿಂದ ಒಂದೊಂದೇ ಅಂಗವನ್ನು ಧ್ಯಾನಿಸುವುದು ಖಂಡ ವೆಂದು ಹೇಳಲ್ಪಡುವುದು.

ಸರ್ವಾಂಗ ಸಂಸ್ಮೃತಿ ರ್ವಿಷ್ಣೋ ರಖಂಡಧ್ಯಾನಮೀರಿತಮ್ ।
ಸಂತತಂ ಧ್ಯಾನಯೋಗೇನ ನಿಷ್ಪ್ರಯತ್ನ ಸಮಾಧಿರ್ಮಾ ॥೨೬॥

ಶ್ರೀವಿಷ್ಣುವಿನ ಸಕಲ ಅವಯುವಗಳನ್ನೂ ಒಂದೇ ಕಾಲದಲ್ಲಿ ಚೆನ್ನಾಗಿ ಸ್ಮರಿಸಿಕೊಳ್ಳುವುದು ಅಖಂಡ ಧ್ಯಾನವು; ನಿರಂತರ ಧ್ಯಾನವೆಂಬ ಉಪಾಯ ದಿಂದ ಪ್ರಯತ್ನವಿಲ್ಲದೆ ಸಮಾಧಿಯುಳ್ಳವನಾಗುವನು.

ಅಸಮಾಧಿರಪಿಜ್ಞಾನೀ ತದ್ಗತೈಕಾಗ್ರಮಾನಸಃ ।
ಉಪಚಾರೈಃ ಷೋಡಶಭಿ ಸ್ತ್ವಾವಾಹನ ಮುಖ್ಯೈರಪಿ ॥೨೬೧॥

ಪ್ರಾಕೃತಾ ಪ್ರಾಕೃತೈರ್ವಾಪಿ ವಿಷ್ಣುರೂಪಾತ್ಮಕೈರಪಿ ।
ಮಾನಸೈ ರಮಲೈರ್ದಿವ್ಯೈ ರ್ಮಹಾರಾಜೋಪಚಾರಕೈಃ ॥೨೬೨॥

ಹೃತ್ಪದ್ಮ ಕರ್ಣಿಕಾನಿಷ್ಟಂ ಯೋಗಿಧ್ಯೇಯಾಂಘ್ರಿ ಪಂಕಜಮ್ ।
ಭಕ್ತ್ಯಾನನ್ಯ ಮನಸಾ ಚಾಪ್ಯರ್ಚನವಿಧಿನಾರ್ಚಯೇತ್ ॥೨೬೩॥

ಸಮಾಧಿಯಿಲ್ಲದಿದ್ದರೂ ಜ್ಞಾನಿಯಾದವನು, ಆ ನಾರಾಯಣನಲ್ಲಿಯೇ ಏಕಾಗ್ರಮನಸ್ಸುಳ್ಳವನಾಗಿ, ಆವಾಹನವೇ ಮೊದಲಾದ ಹದಿನಾರು ಬಗೆಯಾದ ಉಪಚಾರ ಪೂಜೆಗಳಿಂದ, ಪ್ರಾಕೃತ ಮತ್ತು ಅಪ್ರಾಕೃತವಾದ ಅಥವಾ ಶ್ರೀವಿಷ್ಣುರೂಪಗಳೇ ಆದ, ಮಾನಸಿಕವಾದ, ನಿರ್ಮಲವಾದ, ಮನೋಹರವಾದ, ಮಹಾರಾಜನಿಂದ ಪೂಜಿಸಲ್ಪಡಲು ಯೋಗ್ಯವಾದ ಉತ್ತಮ ಸಾಮಗ್ರಿಗಳಿಗೆ ಸದೃಶವಾದ ಪದಾರ್ಥಗಳಿಂದ ಅಥವಾ ಮಹಾರಾಜನನ್ನು ಪೂಜಿಸುವಂತೆ, ಹೃದಯಕಮಲದ ಮಧ್ಯದಲ್ಲಿರುವ ಯೋಗಿಗಳಿಂದ ಧ್ಯಾನಿಸಲ್ಪಡುವ ಪಾದಕಮಲಗಳುಳ್ಳ ಶ್ರೀನಾರಾಯಣನನ್ನು ಹೋಗೆ ಪ್ರತಿಮಾದಿಗಳನ್ನು ಪೂಜಿಸುವಂತೆ, ಅನನ್ಯಮನಸ್ಸಿನಿಂದ ಮತ್ತು ಭಕ್ತಿಯಿಂದ ಪೂಜಿಸುವುದು.

ಮನಃಪೂಜಾವಸಾನೇತು ಕಾಯುಕ್ತೈ ವಾರ್ಚಕೈರಪಿ ।
ಪ್ರಣಮೇತ್ಪುಂಡರೀಕಾಕ್ಷಂ ಯಥಾಶಕ್ತಿ ಯಥಾಮತಿ ॥೨೬೪॥

ಹೀಗೆ ಮಾನಸಿಕಪೂಜೆಯನ್ನು ಮಾಡಿದಮೇಲೆ, ದೇಹದಿಂದ ವಾಕ್ಯಗಳಿಂದ, ತನ್ನ ಶಕ್ತಿಯನ್ನು ಮತ್ತು ಬುದ್ಧಿಯನ್ನು ಅತಿಕ್ರಮಿಸದಂತೆ ಪುಂಡರೀಕಾಕ್ಷನನ್ನು ನಮಸ್ಕರಿಸಬೇಕು.

ಯಾತ್ರಾ ಪ್ರದಕ್ಷಿಣಂ ವಿಷ್ಣೋಃ ಪ್ರಣಾಮಂ ಶಯನಂ ಹರೇಃ।
ವಾಕ್ಯವೃತ್ತಿ ಸ್ತುತಿರ್ಭಾರ್ಯಾ ಮನೋವೃತ್ತಿರನುಸ್ಮೃತಿಃ ॥೨೬೫॥

ನಡೆಯುವದೇ ಶ್ರೀಹರಿಯ ಪ್ರದಕ್ಷಿಣೆಯು; ಮಲಗುವುದೇ ಶ್ರೀಹರಿಗೆ ನಮಸ್ಕಾರವು; ಮಾತನಾಡುವದೇ ಸ್ತುತಿಯು; ಮನಸ್ಸಿನಲ್ಲಿ ಪ್ರತಿಕ್ಷಣ ದಲ್ಲಿಯೂ ಉಂಟಾಗುವ ತರಂಗತರಂಗವಾದ ವಿಷಯಚಿಂತನೆಗಳೇ ಆತನ ಅನುಸರಿಸಿದ ಸ್ಮೃತಿಯು ಆಗುವುದು.

ಸಮರ್ಪಯಿತ್ವಾ ಬಿಂಬೇಸ್ಮಿನ್ ಮಾನಸೇ ಪೂಜನಂ ಪುನಃ।
ತತ್ತತ್ಸ್ಥಾನೇಷು ನಾಡೀಷು ತತ್ತದ್ರೂಪಾಣಿ ಭಾವಯೇತ್ ॥೨೬೬॥

ಮನಸ್ಸಿನಲ್ಲಿರುವ ಈ ಬಿಂಬರೂಪೀ ಹರಿಯಲ್ಲಿ, ಈ ಪೂಜಾದಿಗಳನ್ನು ಸಮರ್ಪಿಸಿ ಮತ್ತು ಆಯಾಯ ಶ್ರೀಹರಿಯ ರೂಪಗಳನ್ನು ನಾಡಿಗಳೇ ಮೊದ ಲಾದ ಸ್ಥಳಗಳಲ್ಲಿ ಮೊದಲಿದ್ದಂತೆಯೇ ಭಾವಿಸುವುದು.

ಏವಂ ಯಃ ಕುರುತೆ ನಿತ್ಯಮಪ್ರಮತ್ತೋ ಶ್ರಿಯಃ ಪತೇಃ।
ಭಕ್ತ್ಯಾತು ಮಾನಸೀಮರ್ಚಾಂ ಜೀವನ್ಮುಕ್ತೋ ನ ಸಂಶಯಃ ॥೨೬೭॥

ಅಪ್ರಮತ್ತನಾಗಿ ಯಾರು ಹೀಗೆ ತಿಳಿದು ಯಾವಾಗಲೂ ಲಕ್ಷ್ಮೀ ಪತಿಯ ಮಾನಸಪೂಜೆಯನ್ನು ಭಕ್ತಿಯಿಂದ ಮಾಡುವರೋ ಅವರು ನಿಸ್ಸಂ ಶಯವಾಗಿ ಜೀವನ್ಮುಕ್ತರೇ.

ಗ್ರಂಥೋಯಂ ಪಾಠಮಾತ್ರೇಣ ಭಕ್ತಿಜ್ಞಾನಾದಿ ಸಿದ್ಧಿದಃ।
ಜ್ಞಾನೇನ ತದನುಷ್ಠಾನಾ ದ್ವಿಮುಕ್ತಿಃ ಶಾಶ್ವತೀಭವೇತ್ ॥೨೬೮॥

ಈ ಗ್ರಂಥವನ್ನು ಪಾರಾಯಣಮಾಡುವ ಮಾತ್ರದಿಂದಲೇ ಭಕ್ತಿ, ಜ್ಞಾನ, ವಿರಕ್ತಿಗಳು ಉಂಟಾಗುವುವು; ಜ್ಞಾನದಿಂದ ಇದರಂತೆ ಅನಷ್ಠಾನ ಮಾಡುವದರ ದೆಸೆಯಿಂದ ಶಾಶ್ವತವಾದ ಮುಕ್ತಿಸುಖವೇ ಆಗುವುದು.